## ಕಲಬುರ್ಗಿಯ

# ಶ್ರೀ ಶರಣಬಸವೇಶ್ವರ ಚರಿತ್ರವು

ಸಂಗ್ರಾಹಕರು ಮತ್ತು ಪ್ರಕಾಶಕರು:
ಜ್ಯೋತಿರ್ವಿದ್ಯಾಭೂಷಣ, ಕರ್ನಾಟಕ ಕವಿರತ್ನ ಪಂಡಿತ,
**ಶ್ರೀ ವೀರನಗೌಡ ಡಿ. ಎಸ್. ಪಾಟೀಲ ಮೆಣಸಿಗಿ**
ಭಾಗ್ಯೋದಯ ಪಂಚಾಂಗ ಕರ್ತರು, ಧಾರವಾಡ.

ಮುದ್ರಕರು:
ಶ್ರೀ ಎಸ್. ವಾಯ್. ಪವಾರ,
ಧಾರವಾಡ ಪ್ರಿಂಟಿಂಗ ಪ್ರೆಸ್, ಧಾರವಾಡ



೧೯೫೫

**ಬೆಲೆ: ೧೨ ಆಣೆ**

|| ಲಿಂಗಮಧ್ಯೇಽಜಗತ್ಸರ್ವಂ ||

ಶ್ರೀ ಶರಣಬಸವೇಶ್ವರ ಪ್ರಸೀದ



ಶ್ರೀಗುರುಮರುಳಾರಾಧ್ಯರು.    ಶಿಷ್ಯೋತ್ತಮ ಶರಣಬಸವೇಶ್ವರನ

**ಹಾಬಲಕಟ್ಟೆಯ ಭವ್ಯದೇವಸ್ಥಾನಕ್ಕಾಗಿ ಕಲಾಪೂರ್ಣತೆಯಿಂದ ರಚಿಸಲ್ಪಟ್ಟ ನೂತನ ಪಂಚಲೋಹದ ಮೂರ್ತಿಯು.**

# ಅರ್ಪಣೆ



ಶಿವಶರಣರ ಘನವಾದ ಮಾರ್ಗದಲ್ಲಿ ನಡೆದು
ಶ್ರೇಷ್ಠವಾದ ತಪಸ್ಸನ್ನಾಚರಿಸುವ ಪರಮವೈರಾಗ್ಯ
ಮೂರ್ತಿಗಳೂ, ಕಾರಣಪುರುಷರೂ ಆದ, ಕಲಬುರ್ಗಿ
ಶ್ರೀಶರಣಬಸವೇಶ್ವರ ಸಂಸ್ಥಾನಾಧಿಪತಿಗಳಾದ,
ಮಹಾಸಾಧುಶಿರೋಮಣಿಗಳಾದ,

**ಶ್ರೀ ದೊಡ್ಡಪ್ಪಾಅಪ್ಪಾ ಊರ್ಫ ಶ್ರೀಶರಣಬಸಪ್ಪ**

ಇವರುಗಳ ದಿವ್ಯ ಪಾದಾರವಿಂದಗಳಿಗೆ

ಈ ಚಿಕ್ಕ ಹೊತ್ತಿಗೆಯನ್ನು ಭಕ್ತಿಪುರಸ್ಸರವಾಗಿ
ಸಮರ್ಪಿಸಲಾಗಿದೆ.

—ಗ್ರಂಥಕರ್ತೃ

|| ಸಿರಿಗನ್ನಡಂಗೆಲ್ಗೆ ||

ಸಾವಳಗಿ ಸಂಸ್ಥಾನ ಮಠಾಧಿಪತಿಗಳಾದ,

# ಶ್ರೀ. ನಿ. ಪ್ರ. ಸಿದ್ಧರಾಮ ಮಹಾಸ್ವಾಮಿಗಳವರ

## :: ಆಶೀರ್ವಾದ ಪತ್ರಿಕೆ ::

[ ಧಾರವಾಡ ಮುಕ್ಕಾಂ ತಾ|| ೩೦-೧-೧೯೫೫ ಮಾಘ ಶು|| ೭ ರವಿವಾರ ]



**ಕನ್ನಡಮ್ಮನ ಕರುಣೆಯ ಕಂದ,**

ನವಿಲುಗುಂದ ಅಜಾತ ನಾಗಲಿಂಗಜ್ಜನ ಕರಕಂಜಾತರಾದ, ಮೆಣಸಿಗಿ ದೇವೇಂದ್ರಗೌಡರ ಸುಪುತ್ರ ವೀರನಗೌಡರೇ, ಕನ್ನಡ ನಾಡಿನ ಇತಿಹಾಸ ಪ್ರಸಿದ್ಧವಾದ ನಲುಂದೆಯ ಸುರುಪುರ, ಅರಳಗುಂಡಿಗೆ ಮೊದಲಾದ ಗ್ರಾಮ, ಪಟ್ಟಣ, ನಗರಗಳನ್ನು ಸುತ್ತಾಡಿ ಶ್ರೀ ಶರಣಬಸವೇಶ್ವರನ ಅವತಾರದಿಂದ ಶಿವಯೋಗ ಸಮಾಧಿಯನ್ನು ಹೊಂದಿದವರೆಗೂ ಆ ಮಹಾತ್ಮನ ಸಂಕ್ಷಿಪ್ತ ಚರಿತ್ರೆಯನ್ನು ಸಂಗ್ರಹಿಸಿಕೊಂಡು ಬರೆದುದರ ಸ್ಮರಣಾರ್ಥವಾಗಿ ಈ ಆಶೀರ್ವಾದ ಪತ್ರಿಕೆಯನ್ನೀಯುವ ಸುವರ್ಣಸಂಧಿಯನ್ನು ಶ್ರೀ ಶರಣಬಸವೇಶ್ವರನು ಒದಗಿಸಿಕೊಟ್ಟದ್ದಕ್ಕಾಗಿ ನಮಗೆ ಕಡುಸಂತಸವಾಗಿದೆ.

**ಸಾಹಸಿಗಳೇ,**

ನೀವು ಮಠಮಾನ್ಯಗಳಿಗಾಗಿ, ದೇವತಾಪ್ರತಿಷ್ಠಾಪನೆಗಾಗಿ, ಸಾರ್ವಜನಿಕ ಫ್ರೀ ಬೋರ್ಡಿಂಗುಗಳಿಗಾಗಿ, ಸಾಹಿತ್ಯಸಮ್ಮೇಲನಗಳಿಗಾಗಿ ವಿದ್ಯಾದಾನ ಹಾಗು ಮಂಗಲಕಾರ್ಯಗಳಿಗಾಗಿ ಕಾಣಿಕೆಯನ್ನು ಸಲ್ಲಿಸಿ ಮನಸಾರೆ ದುಡಿದುದರ ಫಲವಾಗಿ ಇಂದಿನ ನಿಮ್ಮ ಸಾರ್ವಜನಿಕ ಉನ್ನತಿಯು ನಿಮ್ಮ ಜೇಷ್ಠಭ್ರಾತೃಗಳಾದ ಕೀರ್ತಿಶೇಷ ಆಯುರ್ವೇದ ಪಂಡಿತ, ಕವಿಕುಲತಿಲಕ ಕೈ|ವಾ| **ಬಸವನಗೌಡರ** ಮತ್ತು ಹೈದರಾಬಾದ ನಿಜಾಮ ಸರಕಾರದ ಆಸ್ಥಾನ ಪಂಡಿತರಾದ, ಕೈ|ವಾ| **ರುದ್ರಗೌಡರ**, ಸೌಜನ್ಯದ ನೆರಳಲ್ಲಿ ಬೆಳೆದು ಬಾಳಿ ಬಂದಿದೆಯಷ್ಟೇ ! ಮುಂದಾದರೂ ಅವರ ವಿಶಾಲ ನೋಟದ ಮಾಟವು ನಿಮ್ಮ ಬದುಕಿನ ಹಾದಿಯಲ್ಲಿ ಕೈದೀಪವಾಗಲೆಂದು ಹಾರೈಸುತ್ತೇವೆ.

ಉದ್ಯೋಗಪ್ರಿಯರೇ,

ಸತತೋದ್ಯೋಗಿಯಾದ ಪುರುಷಶ್ರೇಷ್ಠನನ್ನು ಭಾಗ್ಯಲಕ್ಷ್ಮಿಯು ತಾನಾಗಿ ಬಂದು ಸೇರುತ್ತಾಳೆಂಬ ನೀತಿವಚನವನ್ನು ಎಳೆವಯಸ್ಸಿನಲ್ಲಿಯೇ ಅರಿತು ಅರಗಿಸಿಕೊಂಡು, ಹಿರಿಯರ ಮನಸೊಲುಮೆಯಿಂದ ದುಡಿದು ಅನೇಕ ಗ್ರಂಥಗಳನ್ನು ರಚಿಸಿ, ಪ್ರ ತಿ ವ ರು ಷ ಪ್ರಕಟಿಸುತ್ತಿರುವ ಭಾಗ್ಯಲಕ್ಷ್ಮಿ "**ಭಾಗ್ಯೋದಯ ಪಂಚಾಂಗ**"ದ ಮುಖಾಂತರ ಮಹಾಕೀರ್ತಿಯನ್ನು ಗಳಿಸಿರುವಿರಿ. ಈಗಲೂ ನೀವು ಆಲಸ್ಯಕ್ಕೆಂಬುಗೊಡದೆ ಹೊಸ ಹೊಸ ಹೊತ್ತಿಗೆಯನ್ನು ಬರೆದು, ರಾಯಚೂರು ಜಿಲ್ಲೆಗೆ ಸೇರಿದ **ಹಾಬಲಕಟ್ಟಿ** ಗ್ರಾಮದಲ್ಲಿ **ಶ್ರೀ ಶರಣಬಸವೇಶ್ವರನ** ಮೂರ್ತಿಯನ್ನು ಸ್ಥಾಪಿಸಿ, ಪುಣ್ಯ ಸಂಪಾದನೆ ಮಾಡುತ್ತಿರುವದು ಈಗಿನ ತರುಣರಿಗೆ ಆದರ್ಶವಾಗಿದೆ.

ಸೌಜನ್ಯಶೀಲರೇ,

ಸರಳಜೀವನ, ಸಮತಾಭಾವನೆ, ತ್ಯಾಗವೃತ್ತಿ ಇವೇ ನಿಮ್ಮ ಜೀವನ ಸೂತ್ರಗಳಾಗಿರುವದರಿಂದ ನೀವು ನಾಡವರ ಪ್ರೀತಿ-ವಿಶ್ವಾಸಗಳನ್ನು ಗಳಿಸಿ ಕೊಂಡಿರುವಿರಿ. ಅಲ್ಲದೆ ಅನೇಕರನ್ನು ನಿಮ್ಮ ಅನುಕರಣ ಮಾಡಹಚ್ಚಿರುವಿರಿ ಇದು ನಿಜಕ್ಕೂ ನಮಗೆ ಅಭಿಮಾನದಮಾತಾಗಿದೆ.

ವಿದ್ಯಾಪ್ರೇಮಿಗಳೇ,

ಅನ್ನದಾನಕ್ಕಿಂತಲೂ ಜ್ಞಾನದಾನವು ಮಿಗಿಲೆಂಬ ಮನವರಿಕೆಯಿಂದ ಕನ್ನಡದೇವಿಯ ಕಂಠಮಣಿಯಂತಿರುವ ರಾಯಚೂರು ಜಿಲ್ಲೆಗೆ ಸೇರಿದ ಕುಷ್ಟಗಿ ಸಾರ್ವಜನಿಕ ಸ್ತ್ರೀ ಬೋರ್ಡಿಂಗಿಗೆ ಎಂಟು ಎಕರೆ ಭೂಮಿಯನ್ನು ದಾನ ವಾಗಿ ಕೊಟ್ಟಿದ್ದಲ್ಲದೆ ನೀವು ಬಹುಮುಖವಾಗಿ ಸೇವೆಯನ್ನು ಸಲ್ಲಿಸುತ್ತಿರುವಿರಿ. ಹಾಗೂ ಕುಡಿಯೊಡೆದು ಬೆಳೆಯುತ್ತಿರುವ **ಮುರಡಿ ಭೀಮಜ್ಜನವರ** ಆನಂದಾಶ್ರಮಕ್ಕೆ ಸೇವೆಸಲ್ಲಿಸುತ್ತಿರುವ ನಿಮ್ಮ ಉದಾರ ಕಾಣಿಕೆಯು ಹೆಗ್ಗುರು ತಾಗಿದೆ. ಎಂದಾದರೊಂದುದಿನ ಕೆಡುವಡಲಿನ ಅಥವಾ ದುಡ್ಡಿನವ್ಯಾಮೋಹಕ್ಕೆ ಬಲಿಬೀಳದೆ, ಅಚ್ಚಳಿಯದೆ ಉಳಿಯುವಂಥದಾದ ಕೀರ್ತಿಕಾಯಕವನ್ನು ನೀವು ಕಲ್ಪಿಸಿಕೊಳ್ಳುತ್ತಿರುವದು ಇನ್ನಿತರ ಜಿಪುಣ, ಬಲ್ಲಿದ, ವಿದ್ಯಾವಂತರಿಗೆ ಮಾರ್ಗ

ದರ್ಶಕವಾಗಿದೆ. ನಿಮ್ಮ ಪವಿತ್ರ ಪರಂಪರೆಗೆ ತಕ್ಕಂತೆ ಅನೇಕ ದೇವತಾಕಾರ್ಯ ಗಳಿಗೂ, ಸಂಘ-ಸಂಸ್ಥೆಗಳಿಗೂ ನೀವು ತನು-ಮನ-ಧನಗಳಿಂದ ಸಹಾಯ ಮಾಡುತ್ತಿರುವದನ್ನು ಕಂಡು ಬಹುಜನರು ಎದೆಮುಂಬಿ ಉಗ್ಗಡಿಸುವದನ್ನು ನಾವು ಕಿವಿಯಾರೆ ಕೇಳಿದ್ದೇವೆ. ಇಂತು ಕೊಡಗೈ ಕಲಿಗಳನ್ನು ಹೆತ್ತೊಡಲ ಹಿರಿಗೆ ಕನ್ನಡ ( ನಿಮ್ಮನ್ನು ಹಡೆದ ಕೈ|ವಾ| ಫಕೀರವ್ವಗೌಡಶಾನಿಗೆ) ತಾಯಿಗೆ ನಿಂತಿಲ್ಲವೆಂಬುದು ನಿಮ್ಮಿಂದ ಸಿದ್ಧವಾಗುತ್ತದೆ.

ಅಚ್ಚುಮೆಚ್ಚಿನ ಅಭಿಮಾನಿಗಳೇ,

ಹರನ ಕರುಣೆಯಿಂದ ಶ್ರೀ ಶರಣಬಸವೇಶ್ವರರ ಕೃಪೆಯಿಂದ, ನಿಮ್ಮ ಬಾಳು ಹಸನಾಗಿ ಹುಲುಸಾಗಿ ಅದರ ಬೆಳಕು ಒಡನಾಡಿಗಳ ಒಳ ಎದೆಯ ಹಣತಿಯಲ್ಲಿ ಎಂದಿಗೂ ಆರದಿರಲೆಂದು ಹಾರೈಸಿ ಹರಸುವದಲ್ಲದೆ, ನಿಮ್ಮ ಕೃತಿಯಿಂದ ನಿಮ್ಮವರು ಕುಷ್ಟಿಗಿ ತಾಲೂಕಿನ ಹಳ್ಳಿಗಳಾದ ಸಾಸ್ವೀಹಾಳ, ಹಿರೇಮನ್ನಾಪೂರ, ಹಾಬಲಕಟ್ಟಿ ಗ್ರಾಮಗಳ ನಿಮ್ಮ ಬಳ್ಳಿಗಳು ಚಿಗಿತು ಚಿಗಿದೊಡೆದು ನಿಮ್ಮ ಹೆಸರಿಗೆ ಆಸರವಾಗಲೆಂದು ಅಕ್ಕರೆಯಿಂದನಮ್ಮ ಸಕಲ ಸದ್ಭಕ್ತರ ಸಾಕ್ಷಿಯೊಡನೆ ಇಂದು ಆಶೀರ್ವಾದಮಾಡಿದ್ದೇವೆ.

ಹಾಬಲಕಟ್ಟೆಯಲ್ಲಿ ಈ ವರುಷ ನಿಮ್ಮಿಂದ ಜರಗಲಿರುವ ಶ್ರೀ ಶರಣಬಸವೇಶ್ವರರ ಮೂರ್ತಿಪ್ರತಿಷ್ಠಾಪನೆ, ಹಾಗೂ ಮಹಾಗಣಾ ರಾಧನೆ ಮತ್ತು ರಥೋತ್ಸವಾದಿ ಅಂದಿನ ಮಂಗಲಸಮಾರಂಭಕ್ಕೆ ಕಾರ ಣರಾದ, ನಿಮ್ಮ ಕುಲೋದ್ಧಾರಕ ಚಕ್ರವರ್ತಿಗಳಾದ ಅರಭಾವೀ ಪುಣ್ಯಾರಣ್ಯದ **ಶ್ರೀಮಹಾಂತ ಶಿವಯೋಗಿಗಳೂ,** ಶ್ರೀ ಶರಣ ಬಸವೇಶ್ವರರೂ ಅನವರತ ಅನುಗ್ರಹಿಸಲಿ ನಿಮ್ಮ ವಂಶಕ್ಕೆ.

—:○:—



# ಆಶೀರ್ವಾದ ಪತ್ರಿಕೆ

ಕುಷ್ಟಗಿ ಮದ್ದಾನಿಸ್ವಾಮಿ ಹಿರೇಮಠದ ಪಟ್ಟಾಧ್ಯಕ್ಷರಾದ,

**ಶ್ರೀ. ಷ. ಬ್ರ. ಕರಿಬಸವ ಶಿವಾಚಾರ್ಯರು**

ಅವರಿಂದ.



ಕಂದ॥ ಕಲಿಸಿದೊಡೇಂ ಬರ್ಕುಮೆ ಸ-।ಲ್ಲಲಿತ ಕವಿತ್ವಂ ನಿಸರ್ಗ ಸುಭಗಂ ರಮಣೀ ॥
ವಿಲಸಿತ ರತಿರಸ ರಸಿಕತೆ । ತಲೆದೋರ್ಪುದು ತಾನೆ ಕಲಿಸಲೇಂ ಬಂದಪುದೇ ॥೧॥

ಎನ್ನುವಂತೆ ಕವಿಯು ಕಾವ್ಯಲೋಕದ ಪ್ರಜಾಪತಿಯು. ಕವಿಯು ವಾಣಿ ಹೃದಯದ ಅಮರವಾಣಿ. ಕವಿತಾಕಾಮಿನಿಯು ಕವಿಯ ಭಾವಪ್ರೇ

ನ್ನತ ಗೌರೀಶಂಕರ ಶಿಖರದಲ್ಲಿ ಪುಟ್ಟಿದ ಪುಣ್ಯಗಂಗಾವಾಹಿನಿ. ಅವನ ಪ್ರಖರ ವಾದ ಕಾವ್ಯತಪಸ್ಸಿನ ಪ್ರಭೆಯೇ ದಿವ್ಯವಾದ ಕಾವ್ಯದ ಪ್ರತಿಭೆಯು. ಕವಿಯ ಹೃದಯವು ಹಣ್ಣಾದಹಾಗೆ ಕವಿತಾಕಾಮಿನಿಯ ಮಂದಹಾಸವು ಉಲ್ಲಾಸ ದಿಂದ ಹೊರಸೂಸಹತ್ತುವದು. ರವಿಯು ಬಾಹ್ಯವಸ್ತು ಪ್ರಕಾಶಕನಾಗಿ ದ್ದಾನೆ. ಕವಿಯು ರವಿಗೆ ನಿಲುಕದ ಅಂತರ್ವಸ್ತುಗಳನ್ನು ತನ್ನ ಅಮೋಘ ಶಕ್ತಿಯಿಂದ ಪ್ರಕಾಶಗೊಳಿಸುತ್ತಿದ್ದಾನೆ.

" **ರವಿಕಾಣದುದಂ-ಕವಿಕಂಡಂ** " ಎಂಬ ನಾಣ್ಣುಡಿಯಂತೆ ಮೇಲಿನ ಮಾತನ್ನು ಹೆಚ್ಚಾಗಿ ಮೆಚ್ಚುತ್ತಿದೆ. ವರಕವಿಯು ಸಹಸ್ರಾಕ್ಷನು ವಿರಾಡ್ರೂಪನು.

ಮಾರಾರಿಯ ಕೃಪೆಯಿಲ್ಲದಂಗೆ ಕವಿತ್ವಶಕ್ತಿಯು ಸಿದ್ಧಿಸದು. ಇಂಥ ಕವಿಗಳ ಬಳಗದಲ್ಲಿ **ಭಾಗ್ಯೋದಯ ಪಂಚಾಂಗ**ಕರ್ತರು ಒಬ್ಬರಾಗಿದ್ದಾರೆ. ಇವರು **ಶ್ರೀ ಶರಣಬಸವೇಶ್ವರ** ಚರಿತ್ರೆ ಎಂಬ ಒಕ್ಕ ಹೊತ್ತಿಗೆಯನ್ನು ಬರೆದು ಪ್ರಕಟಿಸಿದ್ದಾರೆ. ಇದರ ಸದುಪಯೋಗಪಡಿಸಿಕೊಂಡರೆ " **ಕನ್ನಡ ಕಾಳಿದಾಸ** ನನ್ನು ನಿರ್ಮಿಸಿದ ಪುಣ್ಯವು ಕನ್ನಡಿಗರ ಕೈಕುಲುಕುವಂತಾದೀತು.

ಹಿರೇಮುನ್ನಾಪೂರ
ತಾ|| ೭-೧೦-೫೪

ಇತ್ಯೈಷಿಃ



ಶ್ರೀಮದಧಣಿ ಶಿವಯೋಗೀಶ್ವರ ಪ್ರ॥

## ಶ್ರೀ ಶ್ರೀ ಪರಮಪೂಜ್ಯ ಭೋಗಾಪುರ ಶ್ರೀ ವಿರೂಪಾಕ್ಷ ಸ್ವಾಮಿಗಳು ಈಹೊತ್ತಿಗೆಯ ಬಗೆಗೆ ಹೀಗೆ ಅಪ್ಪಣೆಕೊಡಿಸಿದ್ದಾರೆ



ಪರಿಣಾಮಕಾರಿಯಲ್ಲದ ಸಾಹಿತ್ಯವು ಪ್ರಪಂಚದಲ್ಲಿ ಹೆಚ್ಚುಕಾಲ ನಿಲ್ಲಲಾರದು. ಸಾರಸ್ವತ ತಪೋಭೂಮಿಯಲ್ಲಿ ಸಾಧಾರಣನಿಗೆ ಸ್ಥಳವಿಲ್ಲೆಂದು ಈ ಗ್ರಂಥದಿಂದ ಕಂಡುಬರುವದು.

ಭಾಗ್ಯೋದಯ ಪಂಚಾಂಗ ಕರ್ತರು ಬರೆದಿರುವ ಈ ಕೃತಿಯನ್ನು ಓದಿನೋಡಿದೆವು. ಇವರ ಭಕ್ತಿಯೇ ಸಾಹಿತ್ಯ ಸಾಂಸ್ಕೃತಿಕ ಪ್ರತೀಕವಾದವೇ ಭಾಷೆಯಾಗಿ ಹೊರಹೊಮ್ಮಿದೆ.

ಕನ್ನಡ ಸಾಹಿತ್ಯದಲ್ಲಿ ಶಾಶ್ವತ ಸ್ಥಾನವನ್ನು ಗಳಿಸಿದೆ. ಭಾಗ್ಯೋದಯ ಪಂಚಾಂಗ ಕರ್ತರು ನುರಿತ ಸಾಹಿತಿಗಳು ತಮ್ಮ ಲೇಖನಿಯನ್ನು ಹದವರಿತು ಹರಿಸಿದ್ದಾರೆ.

ಚರಿತ್ರೆಯ ಸಾರಾಂಶದ ಮಾಲೆಯು ಸಮುದ್ರದ ತೆರೆಗಳಂತೆ ಬರುತ್ತವೆ. ಸಾಹಿತ್ಯದ ಜೊತೆಗೆ ಸಂಗೀತದ ಸೊಬಗೂ ಸೇರಿದೆ.

ಮುಕ್ಕಾಂ: ಮುಂಬೈ

ತಾ|| ೫-೧೨-೫೪ ಶುಭಂ ಭೂಯಾತ್

ಶರಣಬಸವೇಶ್ವರ ಪ್ರ॥

## ಹಾಬಲಕಟ್ಟಿ ಗ್ರಾಮದ ನೂತನ ಶಿಲಾಮಯವಾಗಿ ನಿರ್ಮಿಸಲ್ಪಟ್ಟ ಭವ್ಯವಾದ ದೇವಸ್ಥಾನವು.



ಯಾವ ವಸ್ತುವಿನ ಶ್ರವಣಮಾತ್ರದಿಂದ ಮನುಷ್ಯನು ಸಕಲಸಂಸಾರ ಬಂಧನಗಳಿಂದಲೂ ಬಿಡುಗಡೆ ಹೊಂದುವನೋ, ಆ ವಸ್ತುವನ್ನೇ ವೇದಗಳು, ಪರಬ್ರಹ್ಮ, ನಿಷ್ಕಲ, ಶಿವ, ಸರ್ವಜ್ಞ, ಸರ್ವಕರ್ತಾ, ಸರ್ವೇಶ, ನಿರ್ಮಲ, ಅದ್ವಯ, ಸ್ವಯಂಜ್ಯೋತಿ, ಅನಾದ್ಯನಂತ; ನಿರ್ವಿಕಾರ, ಪರಾತ್ಪರ, ನಿರ್ಗುಣ ಸಚ್ಚಿದಾನಂದ, ಎಂಬ ಅನೇಕ ನಾಮಗಳಿಂದ ಸ್ತುತಿಸುತ್ತವೆ.

ಈ ಪರವಸ್ತುವಿನ ಅಂಶವೇ ಜೀವನೆಂಬ ಸಂಜ್ಞೆಯಿಂದ ಕರೆಯಲ್ಪಡುವನು. ಅಂತಪ್ಪ ಭಗವದ್ಭಕ್ತ ಶಿವಯೋಗಿ ಶ್ರೀ ಶರಣಬಸವೇಶ್ವರನ ಮೂರ್ತಿಯನ್ನು ಹಾಬಲಕಟ್ಟಿ ದೇವಾಲಯಕ್ಕಾಗಿ ಪ್ರತಿಷ್ಠಾಪನೆಗಾಗಿ, ಮಾಡಿಸಿರುವ ಮೂರ್ತಿಯನ್ನು ನೋಡಿ ಧನ್ಯನಾದೆ. ಇಂಥ ಕಲಾಕೃತಿಯ ಮೂರ್ತಿಯನ್ನು ನಮ್ಮ ನವಯುಗ ಪತ್ರಿಕೆಯ ಭವಿಷ್ಯಾದಾರರಾದ, [illegible] ವೀರನಗೌಡರೇ ಸ್ವಂತ ಖರ್ಚಿನಿಂದ ಮಾಡಿಸಿದ್ದಕ್ಕಾಗಿಯೂ ಇವರ [illegible]ಸಕ್ಕಾಗಿಯೂ ಅನವರತ ಅನುಗ್ರಹಿಸಲಿ ಶ್ರೀ ಶರಣಬಸವೇಶ್ವರನು.

ಹುಬ್ಬಳ್ಳಿ
೮-೨-೧೯೫೫

ತಮ್ಮ,
ತಿ. ರು. ನೆಸ್ವಿ, M. P.
ಸಂಪಾದಕರು, ನವಯುಗ ದಿನಪತ್ರಿಕೆ, ಹುಬ್ಬಳ್ಳಿ.

॥ ಶ್ರೀ ಗುರು ದುರದುಂಡೀಶ್ವರ ಪ್ರಸನ್ನ ॥

ಶರಣಸಂಸ್ಕೃತಿಯ ಅಮೃತಕಿರಣವಾಗಿ ಜನಜೀವನವನ್ನು ತಣಿಸುತ್ತಿರುವ ಪರಮ ಪೂಜ್ಯ ಅರಭಾವೀ ಪುಣ್ಯಕ್ಷೇತ್ರದ, ಶ್ರೀ ದುರದುಂಡೀಶ್ವರ ಸಿದ್ಧ ಸಂಸ್ಥಾನಮಠದ **ಶ್ರೀಶ್ರೀ ಮಹಾಂತಶಿವಯೋಗಿಗಳ ನೇತೃತ್ವದಲ್ಲಿ** ತಾ|| ೩೦-೧-೧೯೭೭ ನೇ ಸಪ್ತಮಿ ಚಂದ್ರವಾರ ಮುಂ|| ೧೧ ಘಂಟೆಗೆ

## ಶ್ರೀ ಶರಣ ಬಸವೇಶ್ವರ ಚರಿತ್ರೆ

### ಎಂಬೀ ಚಿಕ್ಕಹೊತ್ತಿಗೆಯ ಮುದ್ರಣಾರಂಭ ಕಾಲಕ್ಕೆ

### ಶ್ರೀ ಶ್ರೀ ಶಿವಯೋಗಿಗಳು ಆಶೀರ್ವದಿಸಿ ಅಪ್ಪಣೆ ಕೊಡಿಸಿದುದು

ಜಗಜ್ಯೋತಿ ಶರಣ ಬಸವೇಶ್ವರನು ಸುಮಾರು ೨೦೮ ವರುಷಗಳ ಹಿಂದೆ ಹೈದರಾಬಾದ ಸಂಸ್ಥಾನದಲ್ಲಿ ಸಗರನಾಡೆಂದು ಸುಪ್ರಸಿದ್ಧವಾಗಿರುವ ಸುರಪುರ ಸಂಸ್ಥಾನದಲ್ಲಿರುವ ಅರಳಗುಂಡಿಗೆಯೆಂಬ ಚಿಕ್ಕ ಗ್ರಾಮದಲ್ಲಿ ಸಾಲೋಕ್ಯ ವಂಶದ "**ಆದಯ್ಯ-ಮಡಿಯಮ್ಮ**" ರೆಂಬ ವೀರಶೈವ ದಂಪತಿಗಳಿಗೆ ಮಗನಾಗಿ ಅವತರಿಸಿದ, **ಶ್ರೀ ಶರಣ ಬಸವೇಶ್ವರನು** ತನ್ನ ಅಪಾರವಾದ ಮಹಿಮಾವಳಿಗಳನ್ನು ನಡೆಸಿ, ಭಕ್ತರನ್ನು ಉದ್ಧರಿಸಿ ಕಲಬುರ್ಗಿಯ ಪವಿತ್ರ ಸ್ಥಾನವಾದ ಬ್ರಹ್ಮಪುರದಲ್ಲಿ ಶಿವಯೋಗ ಸಮಾಧಿಯನ್ನು ಪಡೆದಿರುವ ಮಹಾನುಭಾವನ ಚರಿತ್ರೆ ಎಂಬೀ ಚಿಕ್ಕ ಹೊತ್ತಿಗೆಯನ್ನು ಇಂದು ಮುದ್ರಣ ಸಮಾರಂಭ ಪ್ರಾರಂಭಕ್ಕಾಗಿ ನಮ್ಮನ್ನು ಧಾರವಾಡ ಪ್ರಿಂ. ಪ್ರೆಸ್ಸಿಗೆ ಬರಮಾಡಿಕೊಂಡು ಮುದ್ರಣಾರಂಭ ಮಾಡಿದ್ದಕ್ಕಾಗಿ, ಧಾರವಾಡ ಪ್ರಿಂ. ಪ್ರೆಸ್ಸಿನ ಒಡೆಯರಿಗೂ ಸಂಗ್ರಾಹಕರಾದ ಭಾಗ್ಯೋದಯ ಪಂಚಾಂಗ ಕರ್ತರಿಗೂ ಈ ಮೂಲಕ ಅಪ್ಪಣೆಯನ್ನು ದಯಪಾಲಿಸಿದ್ದಾರೆ.

ಸಂಸಾರಕ್ಕೆ ಹೆದರಿ, ಗಿರಿ ಗಂಹ್ವರಗಳಲ್ಲಿ ಸೇರಿ ತಮ್ಮೊಬ್ಬರ ಮೋಕ್ಷಕ್ಕಾಗಿ ಶ್ರಮಿಸುವ ಯೋಗಿಗಳ ಮಾರ್ಗವನ್ನು ಬಿಟ್ಟು ಜನ ಸಾಮಾನ್ಯರಲ್ಲಿ ಹುಟ್ಟಿ ಬೆಳೆದು ಎಲ್ಲರ ಸುಖ ದುಃಖಗಳಲ್ಲಿಯೂ ಬೆರೆತು ಅವರಿಗೆ ಭಕ್ತಿ ಜ್ಞಾನ ವೈರಾಗ್ಯಗಳನ್ನು ಭೋಧಿಸಿ, ಪರಿಶುದ್ಧರನ್ನಾಗಿ ಮಾಡಿ ಎಲ್ಲರೂ ಪರಮೇಶ್ವರನ ಕೃಪೆಗೆ ಪಾತ್ರರಾಗುವಂತೆ ಅನುಗ್ರಹಿಸಿರುವ ಶ್ರೀ ಶರಣಬಸವೇಶ್ವರನಂತಹ ಮಹಾನುಭಾವನು ನಮ್ಮ ದೇಶಕ್ಕೆ ಹೆಚ್ಚು ಉಪಕಾರಿಯಾಗುತ್ತಾನೆ.

ವೀರಶೈವ ಶರಣರು ಇಂತಹ ಪೂರ್ಣ ಯೋಗವನ್ನು ಅನುಸರಿಸಿ ನಡೆಯುವದು. ನಮ್ಮ ನಾಡಿನ ಪುಣ್ಯವೆಂದು ನಾವು ಭಾವಿಸುತ್ತೇವೆ.

ಈ ದೃಷ್ಟಿಯಿಂದ ಶ್ರೀ ಶರಣಬಸವೇಶ್ವರರ ಚರಿತ್ರೆಯನ್ನು ಬರೆದು ಇಂದು ಪ್ರಕಟನೆಗಾಗಿ ಕೊಟ್ಟಿರುವ ಭಾಗ್ಯೋದಯ ಪಂಚಾಂಗ ಕರ್ತರ ಸಾಹಸದ ಕೃತಿಯು ಸಮಾಜಕ್ಕೆ ಕನ್ನಡ ತಾಯ್ ಸಿರಿಮುಡಿಯು ಮುಡಿವಂತಾಗಲೆಂದು ಹರಸಿ ಆಶೀರ್ವದಿಸುತ್ತೇವೆ.

ಶ್ರೀ ಶರಣಬಸವೇಶ್ವರರ ಪವಿತ್ರ ವಂಶೀಯರೇ ಆಗಿದ್ದ ಮಾನ್ಯ ದೊಡ್ಡಪ್ಪಾ ಅಪ್ಪಾ ಊರ್ಫ ಶ್ರೀ ಶರಣಪ್ಪಾ ಯಜಮಾನರು ಶರಣರ ಆಚಾರ ವಿಚಾರಗಳನ್ನೇ ಚಾ ಚೂ ತಪ್ಪದೆ ಆಚರಿಸುತ್ತ ಶ್ರೀ ಶರಣಬಸವೇಶ್ವರ ಸಂಸ್ಥಾನದ ಹಾಗೂ ದೇವಾಲಯದ ಕಾರ್ಯ ಕಲಾಪಗಳನ್ನು ಅತ್ಯಂತ ತೃಪ್ತಿಕರವಾಗಿ ನಡಿಸುತ್ತಿರುವರೆಂದು ನಾವು ಕೇಳಿದ್ದೇವೆ. ಶ್ರೀ ಶರಣಬಸವೇಶ್ವರರ ಸಾಂಪ್ರದಾಯದಂತೆ ತ್ರಿಕಾಲ ಲಿಂಗ ಪೂಜಾದಿ ಸೇವ ನಿಷ್ಠರಾಗಿಯೂ ದಾಸೋಹ ನಿಧಿಗಳಾಗಿಯೂ "**ಗುರು-ಲಿಂಗ-ಜಂಗ**" ಮರಲ್ಲಿ ಪ್ರೇಮಪೂರ್ಣರಾಗಿಯೂ ನೀತಿ ಜ್ಞಾನ ವೈರಾಗ್ಯ ಶೀಲರಾಗಿಯೂ ಬೆಳಗುತ್ತಲಿರುವರೆಂದು ನಾವು ಈ ಚರಿತ್ರೆಯ ಮೂಲಕವಾಗಿ ತಿಳಿದು ಹರ್ಷಿತರಾಗಿದ್ದೇವೆ.

ಇವರು ಹೆಣ್ಣುಮಕ್ಕಳ ಸಲುವಾಗಿ ಒಂದು ಮಹಾದೇವಿ ಕನ್ಯಾ ಮಾಧ್ಯಮಿಕ ಶಾಲೆಯನ್ನು ಬಡಮಕ್ಕಳ ಸಲುವಾಗಿ ಫ್ರಿ ಬೋರ್ಡಿಂಗನ್ನೂ ಮತ್ತು ಶ್ರೀ ಶರಣಬಸವೇಶ್ವರ ಹೈಸ್ಕೂಲನ್ನು ನಡಿಸುತ್ತಿದ್ದಾರೆಂದೂ ತಿಳಿಯುತ್ತದೆ.

ಶಿವಾನುಭಾವಿಗಳೂ, ಸಮಾಜೋದ್ಧಾರಕರೂ, ದಾಸೋಹಂಭಾವಿಗಳೂ ಆದ **ಶ್ರೀ ದೊಡ್ಡಪ್ಪಾಅಪ್ಪಾ ಊರ್ಫ ಶ್ರೀ ಶರಣಬಸಪ್ಪ** ಇವರ ಪರಿಶುದ್ಧವಾದ ಹೃದಯ ಭೂಮಿಯಲ್ಲಿ ಶ್ರೀ ಶರಣಬಸವೇಶ್ವರರ ಪರಮಾನುಗ್ರಹ ಬೀಜವು ಅಂಕುರಿಸಿ ಅನೇಕ ಮಹಾನುಭಾವರ ಸಂಗ ಸಹವಾಸಗಳಿಂದ ಬೆಳೆದು ದಾಸೋಹಂಭಾವವು ಅವರಲ್ಲಿ ಸಂಪೂರ್ಣವಾಗಿ ಫಲಿಸಿರಲಿಕ್ಕೆ ಸಾಕು.

ನಿನ್ನೆ ಇರಲಿ ಜನಜೀವನ ಸಮಸ್ಯೆಯು ಕಷ್ಟವಾಗಿ ಧಾರ್ಮಿಕ ದೃಷ್ಟಿ ಕಡಿಮೆಯಾಗಿರುವ ಈ ಸಂಕ್ರಮಣ ಕಾಲದಲ್ಲಿ ಶರಣಬಸವೇಶ್ವರರ ಈ ದಿವ್ಯ ಚರಿತ್ರೆಯನ್ನು ಸಂಗ್ರಹಿಸಿ ಬರೆದು ಮುದ್ರಣಾರಂಭ ಮಹೋತ್ಸವವನ್ನು ನಮ್ಮ ನೇತೃತ್ವದಲ್ಲಿ ಇಂದು ಪ್ರಾರಂಭಮಾಡಿದ್ದಕ್ಕಾಗಿ ಈ ಚಿಕ್ಕ ಹೊತ್ತಿಗೆಯು ಸಮಾಜಕ್ಕೆ ಹೆಚ್ಚಿನ ಪ್ರಯೋಜನವಾಗಲೆಂದು ನಾವು ಆಶೀರ್ವದಿಸುತ್ತೇವೆ.

ಶ್ರೀ ಮುರುಘಾಮಠ
ಧಾರವಾಡ
ಮುಕ್ಕಾಂ ತಾ. ೩೦-೧-೫೫

ಸನ್ನಿಧಿಯ ಪರವಾಗಿ
**ಬಸಪ್ಪಾ ಹುಕ್ಕೇರಿ ಮುರಗೋಡ**

# ಆತ್ಮ ನಿವೇದನೆ !



ಗ್ರಂಥಕರ್ತರು

ಜಗತ್ತಿನಲ್ಲಿ ಅಧರ್ಮ, ಅಸತ್ಯ, ಅನಾಚಾರ ಮೊದಲಾದ ದುರ್ವ್ಯವಹಾರಗಳು ತಲೆಯೆತ್ತಿ ತಾಂಡವವಾಡುತ್ತಿರುವಾಗ ಮಾನವ ಸಮಾಜಕ್ಕೆ ಶಾಂತಿಸಿಗುವದು ದುರ್ಲಭವಾಗುತ್ತದೆ. ಅಂಥ ಸಂದರ್ಭದಲ್ಲಿ,

> ಪರಿತ್ರಾಣಾಯ ಸಾಧೂನಾಂ
> ವಿನಾಶಾಯಚ ದುಷ್ಕೃತಾಂ ।
> ಧರ್ಮಸಂಸ್ಥಾಪನಾರ್ಥಾಯ
> ಸಂಭವಾಮಿ ಯುಗೇ ಯುಗೇ ॥ ೧ ॥

ಎನ್ನುವಂತೆ, ಭಗವಂತನು ಪ್ರಮಥರೂಪದಿಂದವತರಿಸಿ ಕಾಲಕಾಲಕ್ಕೆ ಧರ್ಮೋದ್ಧಾರಗೈಯುವಂತೆ, ಸುಮಾರು ಎರಡು ನೂರು ವರುಷಗಳ ಹಿಂದೆ ವಿಶ್ವ ಶಾಂತಿಗಾಗಿ ವಿಶ್ವರೂಪಾವತಾರಿಯಾದ "**ಶ್ರೀ ಶರಣಬಸವೇಶ್ವರ**" ನು, ಗುಡಗುಂಟಿ "**ಅಮರೇಶ್ವರ**" ನ ವರಪ್ರಸಾದದಿಂದ, ಸುರಪುರ ತಾಲೂಕಿನಲ್ಲಿರುವ ಅರಳಗುಂಡಿಗಿ ಎಂಬ ಗ್ರಾಮದಲ್ಲಿ ಜಗನ್ಮಾತೆಯಾದ ಸಂಗಮ್ಮನವರ ಗರ್ಭದಿಂದ ಅವತರಿಸಿ ಬಂದನು. ಈತನು ಗೃಹಸ್ಥಾಶ್ರಮದ ಕರ್ಮಯೋಗಿಯಾಗಿ ಕಾಯಕನಿರತನಾಗಿ, ದಾಸೋಹ ಕಾರ್ಯವನ್ನೆಸಗುತ್ತ ಅನಂತ ಪವಾಡಗಳನ್ನೆಸಗಿ, ಉತ್ತರ-ಕರ್ನಾಟಕಕ್ಕೆ ಮುಕುಟಮಣಿಯೂ, ಸಕಲಭಗವದ್ಭಕ್ತರಿಗೆ ಪ್ರಿಯಕರವೂ ವಿಶೇಷತಃ ಹರಗುರುಭಕ್ತರಿಗೆ ಆಗರವೂ, ಧರ್ಮಾಚಾರ್ಯರಿಗೆ ಪ್ರಿಯಕರವೂ ಆದ ಸುಪ್ರಸಿದ್ಧವಾದ ಭೂ-ಕೈಲಾಸವೆನಿಸಿದ ಕಲ್ಯಾಣಕ್ಕೆ ಹೋಗುವ ನಿಮಿತ್ಯವಾಗಿ ಹೊರಟು, ಕಲ್ಬುರ್ಗಿಯ ಬ್ರಹ್ಮಪುರದ ದೊಡ್ಡಪ್ಪಗೌಡನ ಭಕ್ತಿಗಾಗಿ ಮೆಚ್ಚಿ ಕಲ್ಬುರ್ಗಿಯಲ್ಲಿಯೇ ಉಳಿದುಕೊಂಡು ಸಾಮಾಜಿಕ, ಧಾರ್ಮಿಕ ಕೊಳೆಯನ್ನು ಹೋಗಲಾಡಿಸಿ, ನಿಜಧರ್ಮವರುಹಿ

ಸಂದೇಶವನ್ನು ರಾಷ್ಟ್ರಕ್ಕೆ ಬೀರಿ, ಶ್ರೀಬಸವಾದಿಪ್ರಮಥರಾಚರಣೆಯಂತೆ, ನುಡಿ ನಡೆಯೊಂದಾಗಿ, ಪವಾಡಪುರುಷನಾಗಿ, ಶಿವನಿಗಿಂತ ಶಿವಶರಣರಧಿಕವೆನ್ನುವಂತೆ ಶಿವಸೃಷ್ಟಿಯನ್ನೇ ಬದಲಿಸುವ ಶಕ್ತಿಯುಕ್ತನಾಗಿದ್ದರೂ ಕೂಡಾ ಕಿಂಕರನಾಗಿ ಶ್ರೀ. ಸ್ವ. ಶಾ. ಶಕ ೧೭೪೪ ನೆಯ ಚಿತ್ರಭಾನು ಸಂ||ರದ, ಫಾಲ್ಗುಣ ಕೃ|| ೧ ಗುರುವಾರ ರಾತ್ರಿ ೧೨ ಗಂಟೆಗೆ ಶಿವನಲ್ಲಿ ಬೆರೆತನು. ಈ ತಪೋಸಿಧಿಯ ಲೀಲೆಗಳನಂತವಿದ್ದರೂ ಕೂಡಾ ನನಗೆ ದೊರೆತ.ವಿಷಯಗಳನ್ನೇ ಸಂಗ್ರಹಿಸಿ ಬರೆದು, ಕಲ್ಬುರ್ಗಿಯ “ಶ್ರೀ ಶರಣಬಸವೇಶ್ವರ ಚರಿತ್ರೆ” ಎಂಬ ಹೆಸರಿಟ್ಟು ಪ್ರಕಟಿಸಿದೆನು. ನಾನು ಬರೆದಿರುವ ವಿಷಯಗಳಲ್ಲದೆ ಬೇರೆ ವಿಷಯಗಳಾಗಲೀ, ನನಗಿಂತಲೂ ಹೆಚ್ಚು ಅಂಶಗಳಾಗಲೀ, ಈ ಚರಿತ್ರೆಯನ್ನು ಓದುವ ವಾಚಕರಿಗೆ ತಿಳಿದಿದ್ದರೆ ಅಥವಾ ಮುಂದಾದರೂ ತಿಳಿದು ಬಂದರೆ, ಅಂತಹ ವಿಷಯಗಳನ್ನು ನನಗವರು ಬರೆದು ಕಳಿಸಿಕೊಟ್ಟವಂಗೆ ನಾನು ಚಿರಋಣಿಯಾಗಿ ದ್ವಿತೀಯ ಮುದ್ರಣ ಪ್ರಸಂಗದಲ್ಲಿ ಸಂಪಾದಿಸುವೆನು.

ಧಾರವಾಡ
ದಿ. ೩೦ ಜನವರಿ ೧೯೫೫

ತಮ್ಮೆಲ್ಲರ ಕೃಪಾಭಿಲಾಷಿ,
**ವೀರನಗೌಡ ಬಿ ಎಸ್ ಪಾಟೀಲ.**



|| ಶ್ರೀಗುರುಭ್ಯೋನ್ನಮಃ

ಕಲಬುರ್ಗಿಯ

# ಶ್ರೀ ಶರಣಬಸವೇಶ್ವರ ಚರಿತ್ರವು



ಹೈದರಾಬಾದ ಸಂಸ್ಥಾನದ, ರಾಯಚೂರು ಜಿಲ್ಹೆಗೆ ಸೇರಿದ, "**ಸುರಪುರ**" ಸಂಸ್ಥಾನದ ( ಸಗರನಾಡೆಂದು ಪ್ರತೀತಿ ಇರುವ ಚಿಕ್ಕ ಸಂಸ್ಥಾನ ) ಲ್ಲಿ ಅರಳಗುಂಡಿಗೆ ಎಂಬ ಗ್ರಾಮವಿದೆ. ಸುಮಾರು ಎರಡು ನೂರು ವರುಷಗಳ ಮುಂಚೆ ಆ ಗ್ರಾಮದಲ್ಲಿ "**ಆದಪ್ಪ-ಮಡಿಯಮ್ಮ**" ರೆಂಬ ದಂಪತಿಗಳು ಶಿವಭಕ್ತ ಸಂಪನ್ನರಾಗಿದ್ದರು.

**ಶ್ಲೋ|| ವಾಂಛಾ ಸಜ್ಜನ ಸಂಗಮೇ ಪರಗುಣೇ ಪ್ರೀತಿರ್ಗುರೌ ನಮ್ರತಾ |**
**ವಿದ್ಯಾಯಾಂ ವ್ಯಸನಂ ಸ್ವಯೋಷಿತಿ ರತಿರ್ಲೋಕಾಪವಾದಾದ್ಭಯಾಂ |**
**ಭಕ್ತಿಶ್ಶೂಲಿನಿ ಶಕ್ತಿರಾತ್ಮದಮನೇ ಸಂಸರ್ಗಮುಕ್ತಿಃ ಖಲೇ |**
**ಷ್ವೇತೇ ಏಷು ನಸಂತಿ ನಿರ್ಮಲ ಗುಣಾಸ್ತೇಭ್ಯೋ ನರೇಭ್ಯೋ ನಮಃ ||೧||**

ಎಂಬಂತೆ ಆದಪ್ಪನು, ಸಜ್ಜನರ ಸಂಗತಿಯಲ್ಲಿ ಆಶೆಯುಳ್ಳವನೂ ಅನ್ಯರಗುಣಕ್ಕೆ ಪ್ರೀತಿಸುವವನೂ, ಗುರುವಿನಲ್ಲಿ ವಿನಯವುಳ್ಳವನೂ, ಶಿವವಿದ್ಯೆಯಲ್ಲಿ ವ್ಯಸನವುಳ್ಳವನೂ, ತನ್ನ ಹೆಂಡತಿಯ ವಿನಹ ಮಿಕ್ಕಾದ ಅಬಲೆಯರು ತಾಯಿಯ ಸಮಾನವೆಂದು ತಿಳಿದವನೂ, ಜನಪದ ಅಪವಾದಕ್ಕೆ ಅಂಜಿಕೆಯುಳ್ಳವನೂ, "**ಗುರು-ಲಿಂಗ-ಜಂಗ**" ಮರಲ್ಲಿ ಭಕ್ತಿಯುಳ್ಳವನೂ, ಮನಸ್ಸನ್ನು ಜಗ್ಗಿ ಹಿಡಿಯುವಷ್ಟು ಶಕ್ತಿಯುಳ್ಳವನೂ, ದುಷ್ಟರ ಸಂಗವಿಲ್ಲದವನೂ ಆಗಿ ರಂಜಿಸುತ್ತಿದ್ದನು.

ಅವನ ಹೆಂಡತಿಯಾದರೂ ತನ್ನ ಆಚರಣೆಯಿಂದ ಭೂ-ಜನಕ್ಕೆ ನಡೆನುಡಿಗಳನ್ನು ಕಲಿಸಲಿಕ್ಕೆಂದು ಬಂದ ದೇವಿಯಂತೆ ಕಂಗೊಳಿಸುತ್ತಿದ್ದಳು. "**ಯದ್ಭರ್ತುರ್ರೇವ ಹಿತಮಿಚ್ಛತಿ ತತ್ಕಲತ್ರಂ**" ಎಂಬಂತೆ ಆದಪ್ಪನ ನಿಜರಮಣಿಯಾಗಿದ್ದಳು. ನಾರಿ-ಸ್ವರ್ಗಕ್ಕೆ ದಾರಿ! ನಾರಿ-

ಉಪಕುಪಕಾರಿ!! ಎಂಬ ಸರ್ವಜ್ಞನ ಭಾವವು ನಿಜವೆಂಬದು ಈಕೆಯ ನಡಾವಳಿಕೆಯಿಂದ ಒಡೆದು ಕಾಣುತ್ತಿತ್ತು.

ಶ್ಲೋ॥ ಮಾನುಷ್ಯಂ ವರವಂಶ ಜನ್ಮ ವಿಭವೋ ದೀರ್ಘಾಯುರೋಗ್ಯತಾ ।
ಸನ್ಮಿತ್ರಂ ಸುಸುತಃ ಸ್ವಯೋಷತಿ ರತಿರ್ಭಕ್ತಿಶ್ಚ ಗೌರೀಪತೌ ।
ವಿದ್ವತ್ವಂ ಸುಜನತ್ವಮಿಂದ್ರಿಯಜಯಸ್ಯತ್ಪಾತ್ರದಾನೇರತಿಃ ।
ತೇ ಪುಣ್ಯೇನ ವಿನಾ ತ್ರಯೋದಶ ಗುಣಾಃ ಸಂಸಾರಿಣೋ ದುರ್ಲಭಾಃ॥೧॥

ಎಂದಂತೆ ಇಂಥ ಸಂಸಾರಿಯು ದುರ್ಲಭನು. ಈ ಹದಿಮೂರು ಕಂಡಲ್ಲಿ ಉತ್ತಮ ಸಂಸಾರಿಯು "**ಗೃಹಣೀ ಗೃಹಮುಚ್ಯತೇ**" ಎಂದಿರುವದರಿಂದ ಇವನ ಹೆಂಡತಿಯಾದರೂ ಇವನ ಗುಣಕ್ಕೆ ಸರಿಯಾಗಿ ಆನಂದವನ್ನುಂಟುಮಾಡುತ್ತಿದ್ದಳು. ಈಕೆಯು ಗಂಡನಕಾರ್ಯದಲ್ಲಿ ಮಂತ್ರಿಯಂತೆ ಸಹಾಯಮಾಡುತ್ತಿದ್ದಳು. ಮನೆಯ ಕೆಲಸಗಳಲ್ಲಿ ಬೇಸರವಿಲ್ಲದೆ ತೊತ್ತಿನಂತೆ ದುಡಿಯುತ್ತಿದ್ದಳು. ಗಂಡನಿಗೆ ಉಣಿಸುವಲ್ಲಿ ಅವನ ತಾಯಿಯ ಭಾವನನ್ನು ತಾಳುತ್ತಿದ್ದಳು. ದಾನ-ಧರ್ಮಕ್ಕೆ ಗಂಡನಿಗೆ ಅನುಕೂಲಳಾಗಿ, ಶಾಂತಗುಣದಿಂದ ಭೂಮಿಯನ್ನು ಗೆದ್ದು ಅವನ ಪ್ರೀತಿಗೆ ರಂಭೆಯಂತೆ ಸುಖವನ್ನು ಕೊಡುತ್ತ ಶೋಭಿಸುತ್ತಿದ್ದಳು. ಅವಳು ಎರಡನೇ ಗಂಡಸರ ಮುಖವನ್ನು ಕೆಟ್ಟ ಮನಸ್ಸಿನಿಂದ ಎಂದೂ ನೋಡಲಿಲ್ಲ. ಅವಳು ಒಮ್ಮೆ ಪುರಾಣವನ್ನು ಕೇಳುವಾಗ ಶಿಲಾದ ಮುನಿಯ ಕಥೆಯಲ್ಲಿ ಮಕ್ಕಳಿಲ್ಲದವರಿಗೆ ಮೋಕ್ಷವಿಲ್ಲೆಂಬ ಮಾತನ್ನು ಕೇಳಿ, "ನಾರಿಯರು ಕುಟ್ಟುವಾಗ ಹಾಡುವ ಪದವೊಂದು ನೆನಪಾಗಿ"—

ಬಾಲಕರಿಲ್ಲದ ಬಾಲಿದ್ಯಾತರ ಜನ್ಮ ಬಾಡಿಗಿ ಎತ್ತು ದುಡಿದಾಂಗ ।
ಬಾಳೆಲೆಯ । ಹಾಸ್ಯುಂಡು ಬೀಸಿ ಒಗದ್ಹಂಗ ॥೧॥

ಎಂದು ಕಸವಿಸಿಯಿಂದ ಮನೆಗೆ ಬಂದು ತನ್ನ ಗಂಡನ ಮುಂದೆ ಮಕ್ಕಳಿಲ್ಲದ ನಮ್ಮ ಬಾಳ್ವೆಯು ವ್ಯರ್ಥವಾದದ್ದು. ನಮಗೆ ಗತಿಯೇ ಇಲ್ಲವಲ್ಲ ಎಂದು ದುಃಖಿಸುತ್ತಿರಲು, ಆದಪ್ಪನು ಮರುಗೀ ? ಪ್ರಾಣದ

ದಲ್ಲಿ ಶಿವನನ್ನು ಪೂಜಿಸಿ ಮಕ್ಕಳನ್ನು ಪಡೆದವರ ಅನೇಕ ಕಥೆಗಳನ್ನು ನೀನು ಕೇಳಿಲ್ಲವೇ? ಸಾಕು ಸಾಕು! ದುಃಖವನ್ನು ಸಾಕುಮಾಡು. ಹಂಪೆಯ ಶ್ರೀ ವಿರೂಪಾಕ್ಷನನ್ನು ನಂಬಿ, "**ಮಹಾದೇವ** ಮತ್ತು **ರುದ್ರಾಣಿ**" ಗಳೆಂಬ ಗಂಡ-ಹೆಂಡರು **ರಾಘವಾಂಕ**ನೆಂಬ ಮಗನನ್ನು ಹೊಂದಿ ಹರನಿಗಿಂತಲೂ ಗುರುವೇ ದೊಡ್ಡವನೆಂದು ತೋರಿಸಿದಂಥ, ಉಭಯ ಕವಿ ಶರಭ ಭೇರುಂಡನೆಂದೆನಿಸಿದಂಥ ಆ ಮಗನಿಂದಲೇ ಗತಿ ಗಾಣಲಿಲ್ಲವೆ? ಮತ್ತೊಬ್ಬ ಶಿವಕವಿ, ಶಿವದೇವನೆಂಬ ಹರಭಕ್ತನು ಪಂಪೆಯ ಹರಿಹರಾಚಾರ್ಯನನ್ನು ಪೂಜಿಸಿ ಮಗನನ್ನು ಹಡೆದು, **ಭೀಮ**ನೆಂದು ಹೆಸರಿಟ್ಟನು. ಆತನೇ ಪ್ರಖ್ಯಾತನಾಗಿ ಪಾಲ್ಕುರಿಕೆಯ ಸೋಮನನ್ನು ನಂಬಿ ಬಸವ ಪುರಾಣವನ್ನು ವರ್ಣಕದಿಂದೆರಚಿಸಿ ಸನ್ಮಾರ್ಗದಲ್ಲಿ ನಡೆದು ಶಿವನ ಕರುಣೆಗೆ ಗುರಿಯಾಗಲಿಲ್ಲವೇ? ಶಿವಭಕ್ತರಿಗೆ ಚಿಂತೆ ಏಕೆ! ನಿನ್ನ ಶರೀರವೆಂಬ ಬಳ್ಳಿಗೆ ಫಲವಾಗುವದೆಂಬ ಆಶೆಯೂ ನನ್ನಲ್ಲಿ ಅಂಕುರಿಸಿದೆ. ಶಿವಭಕ್ತಿಯಿಂದ ಕೂಡಿದ ಸದ್ಗುಣ ಸಂಪನ್ನನಾದ ಮಗನನ್ನು ಎಂದಿಗೆ ಕಂಡೇನೋ ಎಂದು ನಾನೂ ಆಶಿಸುತ್ತೇನೆ. ಆದರೆ........?

**ದುಃಖಂ ನೇಚ್ಛಂತಿ ಕಿಂತು ಪಾಪಂ ಕುರ್ವಂತಿ ಯತ್ನತಃ**

ಅಂದಂತೆ, ಪೂರ್ವದಲ್ಲಿ ದುಃಖದ ಆಶೆಯು ಇರದಿದ್ದರೂ ನಾವು ಪಾಪಬೀಜವನ್ನು ಬಿತ್ತಿರಲಿಕ್ಕೆಬೇಕು. ಅಂತೆಯೇ ಈಗ ದುಃಖವನ್ನು ಉಂಡುವೆವು. ಆದರೂ ಕರ್ಮದುಃಖವನ್ನು ಹರಿಯುವ "**ಗುರು-ಲಿಂಗ-ಜಂಗಮರ**" ಪಾದಸ್ಮರಣೆಯನ್ನು ಬಿಡಬಾರದು ಕಂಡೆಯಾ....? ಈ ಶಿವಚಿಂತನೆಯಿಂದ ನಮ್ಮ ದುಃಖವನ್ನು ಕಳೆಯುವ ಮಗನನ್ನು ಕಂಡೇವು. ಶಿವಭಕ್ತರಿಗೆ ಚಿಂತೆ ಏಕೆ....? ನಾವೂ, **ಗುಡಗುಂಟಿಯ** ಅಡವಿಯಲ್ಲಿರುವ ಅಮರಕೊಳ್ಳದಲ್ಲಿ ಪೂಜ್ಯನೆಂದು ಮೆರೆದಿರುವ ಶಿವ

ಲಿಂಗವನ್ನು ನಂಬಿದ್ದಾದರೆ ನಮ್ಮ ಇಚ್ಛೆ ಏಕೆ ಪೂರ್ಣವಾಗಲಿಕ್ಕಿಲ್ಲ. ಎಂದು ಹೇಳಲಾಗಿ, ಅವನ ಹೆಂಡತಿಯಾದ ಮುಕ್ತಿಯಮ್ಮನು ಸಮಾಧಾನ ಹೊಂದಿದಳು. ಇಬ್ಬರೂ ಶಿವಲಿಂಗ ಸೇವೆಗಾಗಿ ಅಮರಕೊಳ್ಳದ ಅಮರೇಶ್ವರ ದೇವಸ್ಥಾನಕ್ಕೆ ಹೋದರು.

ಅವರೀರ್ವರೂ ಅಮರಕೊಳ್ಳಕ್ಕೆ ಹೋದಬಳಿಕ, ಅಮರಗುಂಡನ ಪಾದದಮೇಲೆ ಬಿದ್ದು ಹೊರಳಾಡಬೇಕೆಂಬ ಭಕ್ತಿಯು ಮನಸ್ಸಿನಲ್ಲಿ ಉಕ್ಕೇರಿ ಹೊರಚಿಮ್ಮಹತ್ತಿತು. ಆದರೆ ಲಿಂಗಮೂರ್ತಿಯಾದ, **ಅಮರೇಶ್ವರನು** ಅವರಿಗೆ ಕಾಣಲೇ ಇಲ್ಲ. ಆಗವರು ಬಹಳ ದುಃಖಿತರಾಗಿ ದೇವಾ ಅಮರನಾಥ, ಭಕ್ತರಕ್ಷಕಾ, ನಮ್ಮ ಅನಂತ ಪಾಪಗಳಿದ್ದರೂ ಕೂಡಾ ಅವನ್ನೆಲ್ಲವನ್ನು ಪರಿಹರಿಸಿ, ನಮಗೆ ನಿನ್ನ ದಿವ್ಯದರ್ಶನವನ್ನು ಕೊಡು ಎಂದು ಅಮರೇಶ್ವರ (ಶಿವಲಿಂಗ) ನಲ್ಲಿಯೇ ಮನಸ್ಸುಳ್ಳವರಾಗಿ ಎಲ್ಲವನ್ನೂ ಮರೆತು ಅನ್ನ–ನೀರುಗಳ ಪರಿವೇ ಇಲ್ಲದೆ, ತದೇಕ ಧ್ಯಾನಾಸಕ್ತರಾಗಿ, ಪ್ರಭೋ ಅಮರನಾಥಾ, ದೇವ ದೇವಾ, ಮಕ್ಕಳನ್ನು ಕೊಡೆಂದು ದರಿದ್ರರಾದ ನಾವು ಬೇಡುತ್ತಿರುವೆವು. ಬಡತನವಾದರೂ ನಮ್ಮನ್ನು ಗೋಳಾಡಿಸುತ್ತಿರುವದು. ಆದರೆ ಅದರ ಚಿಂತೆ ನಮಗಿಲ್ಲವೆಂದು ಪರಿಪರಿಯಾಗಿ ಸ್ತೋತ್ರಮಾಡುತ್ತ ಶಿವಲಿಂಗವನ್ನು ಏಕಾಗ್ರಚಿತ್ತದಲ್ಲಿರಿಸಿ ಮೈಮರೆತು ಪರವಶರಾಗುತ್ತಿದ್ದರು. ಹೀಗೆಯೇ ದಂಪತಿಗಳೀರ್ವರು ಅಮಾವಾಶಿಗೊಮ್ಮೆ ಕುಲದೇವರಾದ ಅಮರೇಶ್ವರನ ಕ್ಷೇತ್ರಕ್ಕೆ ಹೋಗಿ ಉಷಃಕಾಲಕ್ಕೆದ್ದು ತ್ರಿಕರಣಪೂರ್ವಕ ಭಕ್ತಿಯಿಂದ ದೇವಾಲಯದ ಅಂಗಣವನ್ನು ಉಡುಗಿ, ಪೂಜೆಮಾಡಿ ಭಯಭಕ್ತಿಯಿಂದ ನಿನ್ನ ಪಾದಭಕ್ತಿಯುಳ್ಳ ಮಗನನ್ನು ದಯಪಾಲಿಸೆಂದು ಇಬ್ಬರೂ ಬೇಡಿಕೊಳ್ಳುತ್ತ ಶಿವಲಿಂಗವಾದ ಅಮರೇಶ್ವರನ ಸೇವೆಯಲ್ಲಿ ಕಾಲಕಳೆಯುತ್ತಿದ್ದರು.

**"ಆದಪ್ಪ-ಮಡಿಯಮ್ಮ"** ನವರು ಅಷ್ಟಾವರಣನಿಷ್ಠರಾಗಿಯೂ ಪಂಚಾಚಾರ ಪರಾಯಣರಾಗಿಯೂ, ಸನ್ಮಾರ್ಗಪ್ರವೃತ್ತಿಯುಳ್ಳವರಾಗಿಯೂ **"ಗುರು-ಲಿಂಗ-ಜಂಗಮ"**ರ ಪದ ಸರಸಿಜ ಭೃಂಗರಾಗಿಯೂ ಶಿವನಾಮಕ್ಕೆ ಒತ್ತಿಗೊಟ್ಟನಾಲಿಗೆಯುಳ್ಳವರಾಗಿಯೂ, ಶಿವಸ್ತುತಿಯಿಂದ ತುಂಬಿದ ಕರ್ಣಗಳುಳ್ಳವರಾಗಿಯೂ, ಪರೋಪಕಾರಾದಿ ಸದ್ಗುಣಗಳೇ ಆಭರಣಗಳೆಂದು ತಿಳಿದುಕೊಂಡವರಾಗಿಯೂ, ಅಂಗ ಗುಣಗಳನ್ನೆಲ್ಲ ನೀಗಿ, ಹಟಭಕ್ತಿಯಿಂದ ಕೂಡಿದವರಾಗಿ ಶಿವಾನಂದದಲ್ಲಿರುತ್ತಿದ್ದರು.

ಒಂದಾನೊಂದು ದಿನ ದಂಪತಿಗಳಿರ್ವರು ಅಮರೇಶ್ವರನ ನಾಮ ಸ್ಮರಣೆಯಿಂದ ನಿತ್ಯದಂತೆ ಜಂಗಮರಿಗೆ ತೃಪ್ತಿಪಡಿಸಿ, ಶಿಕ್ಷಾದ ಪ್ರಸಾದವನ್ನು ಸಲಿಸಿ ಹರಭಕ್ತಿ ಸಂಪನ್ನನಾದ ಮಗನನ್ನು ನಮಗೆ ಶಿವನೆಂದು ಕರುಣಿಸುವನೋ ಎಂದು ಚಿಂತಿಸುತ್ತ ಮಲಗಿಕೊಂಡರು. ಅಂದು ಆದಪ್ಪ-ಮಡಿಯಮ್ಮನವರ ಸ್ವಪ್ನದಲ್ಲಿ ಅಮರೇಶ್ವರನು ಪ್ರತ್ಯಕ್ಷನಾಗಿ ಬಂದು, ಮಕ್ಕಳೇ, ಹೆದರಬೇಡಿರಿ! ನಾನು ಭಕ್ತಾಧೀನನು; ನೀವೇನು ಚಿಂತಿಸಬೇಡಿರಿ. ಶಿವಶರಣೆ ಮಡಿಯಮ್ಮಾ ನಿನ್ನ ಭಾವನ ಸತಿ ಸಂಗಮ್ಮನ ಉದರದಿಂದ ಜನಿಸುವ ಶಿಶುವೇ ನಿಮ್ಮ ಮಗನಾಗಿ ಅನಂತ ಪವಾಡಗಳನ್ನು ಮಾಡುವನು. ಆ ಬಾಲಕನಿಂದಲೇ ನಿಮಗೆ ಸದ್ಗತಿಯಾಗುವದು ಎಂದು ಹೇಳಿ ಕಾಣದಂತಾದನು. ಅದೇ ರಾತ್ರಿ **ಸಂಗಮ್ಮನ** ಸ್ವಪ್ನದಲ್ಲಿಯೂ ಕೂಡಾ ಶ್ರೀ ಅಮರೇಶ್ವರನು ಪ್ರತ್ಯಕ್ಷನಾಗಿ, ತಂಗೀ ನಿನ್ನ ಉದರದಲ್ಲಿ ಜನಿಸುವ ಕೂಸನ್ನು "ಆದಪ್ಪ-ಮಡಿಯಮ್ಮ" ನವರ ಉಡಲಲ್ಲಿ ಹಾಕಿ ಅವರಿಗೇನೇ ಸಲ್ಲಿಸತಕ್ಕದ್ದು. ನಿನ್ನ ಬಾಲಕನು ಮಹಾಮಹಿಮನೂ, ಅಷ್ಟಾವರಣನಿರತನೂ, ಪರಮದಾಸೋಹಪುರುಷನೂ, ಜಗದ್ವಿಖ್ಯಾತಿಯೂ ಆಗಿ, ಪೂಜೆಗೊಳ್ಳುವನು. ಆತನಿಗೆ **"ಶರಣಬಸವೇಶ್ವರ"** ನೆಂದು ಹೆಸರಿಟ್ಟು ಕರೆಯತಕ್ಕದ್ದೆಂದು ಹೇಳಿ ಕಾಣದಂತಾದನು.

ಅತ್ತ ಆದಪ್ಪ–ಮಡಿಯಮ್ಮನೂ, ಇತ್ತ ಸಂಗಮ್ಮನೂ ಎಚ್ಚತ್ತು ನೋಡಲಾಗಿ ವಿಚಿತ್ರ ಸ್ವಪ್ನವೆಂದೆಣಿಸಿ, ಬೆಳಗಾಗುವ ವರೆಗೆ ಶಿವನಾಮ ಸ್ಮರಣೆಯಿಂದ ಕಾಲಕಳೆದರು. ಪ್ರಾತಃಕಾಲದ ನಿತ್ಯಕರ್ಮಗಳನ್ನು ತೀರಿಸಿ, ಅಂದು ಗಣಾಧೀಶ್ವರರಿಗೆ ಅರ್ಘ್ಯ, ಪಾದ್ಯ ಮೊದಲಾದ ಷೋಡಶೋಪ ಚಾರಗಳಿಂದ ತೃಪ್ತಿಪಡಿಸಿ, ಶಿವನ ಕೃಪೆಯಿಂದಾಗುವದೋ ಎಂದು ಕಾಲ ನಿರೀಕ್ಷಣಮಾಡತೊಡಗಿದರು.

ಮುಂದೆ ಕೆಲವು ದಿವಸಗಳಲ್ಲಿಯೇ “ಸಂಗಮ್ಮನ” ಶರೀರವೆಂಬ ಬಳ್ಳಿಯು ಫಲವನ್ನು ಕೊಡುವದೆಂಬ ಸೂಚನೆಯಂತೆ ಪುಷ್ಪವತಿ ಯಾದಳು. ನಾಲ್ಕನೇ ದಿವಸ ಶುದ್ಧಾಂಗಿಯಾಗಿ ದಂಪತಿಗಳು ಸುಖ ವನ್ನು ಹೊಂದಲಾಗಿ ಸಂಗಮ್ಮನು ಗರ್ಭಿಣಿಯಾದಳು. ಬರಬರುತ್ತ ಅವಳಿಗೆ ಬಯಕೆಗಳು ಹತ್ತಿದವು. ಶಿವಕೀರ್ತನಗಳನ್ನು ಕೇಳುವ ಬಯಕೆ, ಶಿವಪೂಜೆಮಾಡುವ ಹಾಗೂ ನೋಡುವ ಬಯಕೆ, ಶಿವನಾಮವನ್ನು ನುಡಿಯುವ ಬಯಕೆ, ಶಿವನಿಗೆ ಎಡೆಮಾಡದೆ ಏನೂ ತಕ್ಕೊಳ್ಳದ ಬಯಕೆ ಮೊದಲಾದ ಎಲ್ಲ ಬಯಕೆಗಳು ಶ್ರೀ ಅಮರೇಶ್ವರನ ಕರುಣೆಯಿಂದ ಕೈಗೂಡುತ್ತ ಸಂತೋಷವನ್ನುಂಟುಮಾಡಿದವು. ಅವಳ ರಜೋ (ಮುಟ್ಟು) ಗುಣವು ಹೋಗಲು, ತಮೋ (ಕಪ್ಪು) ಗುಣವು ಒಳಗೆ ನಿಲ್ಲ ಲಾರದೆ ಹೊರಬೀಳುವದೋ ಏನೋ ಎಂಬಂತೆ, ಕಪ್ಪು ಮೊಲೆಯ ತುದಿಗಳಿಗೆ ಬಂದಿತು. ಇನ್ನು ಸತ್ವ (ಬಿಳಿದು) ಗುಣವೊಂದೇ ಬಲವತ್ತ ರವಾದುದರಿಂದಲೇ ಅವಳಂಗವು ಕಾಂತಿಯುಕ್ತ ಬೆಳ್ಳಗಾಯಿತು. ಮುಂದೆ ಗರ್ಭದ ಎಂಟನೆಯ ತಿಂಗಳಲ್ಲಿಯೇ ಲಿಂಗಧಾರಣ ಮಾಡಿಸಿದ್ದ ರಿಂದ ಗರ್ಭಸ್ಥ ಶಿಶುವಿಗೂ ಮಂತ್ರ ಪಿಂಡವಾಯಿತು. ನವಮಾಸಗಳು ತುಂಬಿದವು. ಶ್ರೀಶಕ ೧೬೩೭ರ ನೇ ಕ್ಷಯನಾಮ ಸಂವತ್ಸರದ, ಪೌಷ್ಯ ಮಾಸೇ, ಉತ್ತರಾಯಣೇ ಹೇಮಂತಋತೌ, ಕೃಷ್ಣಪಕ್ಷೇ ಷಷ್ಠ್ಯಾಮಾ ಚಂದ್ರವಾರ ಚಿತ್ತಾನಕ್ಷತ್ರದಲ್ಲಿ **ಸಂಗಮ್ಮನು** ಗಂಡುಕೂಸನ್ನು

ಹೆತ್ತಳು. ಅಂದು **“ ಆದಪ್ಪ–ಮಡಿಯಮ್ಮ ”** ನವರ ಆನಂದಕ್ಕೆ ಪಾರವೇ ಇಲ್ಲದಂತಾಯಿತು. ಜನನ ಕ್ರಿಯೆಗಳೆಲ್ಲವೂ ಸರಿಯಾಗಿ ನಡೆದವು ಹನ್ನೆರಡನೆಯ ದಿವಸ ಮಂಗಳೆಯರು ತೊಟ್ಟಿಲಲ್ಲಿ ಮಗನನ್ನು ಹಾಕಿ **ಅಮರೇಶ್ವರನು** ಸ್ವಪ್ನದಲ್ಲಿ ಅಪ್ಪಣೆ ಕೊಡಿಸಿದಂತೆ **“ ಶರಣ ಬಸವ ”** ನೆಂದು ಹೆಸರನ್ನು ಇಟ್ಟು ಬಾಗಿಣವನ್ನು ತಕ್ಕೊಂಡು ಸಂತೋಷದಿಂದ ಹೋದರು.

ದಿನ ದಿನಕ್ಕೆ ಕಳೆಯೇರಿ ಬೆಳೆಯುತ್ತಿರುವ ಬಾಲಕನು ಅರಳಗುಂಡಿಗಿಯ ನಿವಾಸಿಗಳಿಗೆ ಕಣ್ಮಣಿಯಾದನು. ಇಂತು ವೃದ್ಧಿ ಹೊಂದುತ್ತಿರುವ, ಶರಣ ಬಸವೇಶ್ವರನು ತನ್ನ ಬಾಲ ಲೀಲೆಗಳಿಂದ ಮನೆಗೆಲಸದಲ್ಲಿ ತಂದೆ ತಾಯಿಗಳಿಗೆ ಅಡೆ ತಡೆಯನ್ನೊಡ್ಡುವನು. **ಜನನಿ ಸಂಗಮ್ಮನೂ, “ ಆದಪ್ಪ–ಮಡಿಯಮ್ಮ ”** ನವರೂ ಲಿಂಗಮಧ್ಯದಲ್ಲಿ ದೃಷ್ಟಿಯನ್ನು ನೆಲೆಗೊಳಿಸಿದಾಗ ಜಗಜ್ಯೋತಿ ಬಸವಣ್ಣನೇ ಮಗನ ರೂಪದಿಂದ ಜನ್ಮವೆತ್ತಿದನೋ ಎಂಬಂತೆ ಮಗನ ತೇಜವು ಕಣ್ತುಂಬುವದು. ಒಮ್ಮೊಮ್ಮೆ ಸಂಗಮ್ಮನು ಬಾಲ ಲೀಲೆಗಳನ್ನು ನೋಡುತ್ತ

**ಪದ್ಯ॥ ಅಣ್ಣ ಬಾ ಮುಕ್ಕಣ್ಣ ಬಾ ಬಸ ।**
**ವಣ್ಣ ಬಾ ಹುಣ್ಣಿವೆಯ ಸಸಿ ಬಾ ।**
**ಕಣ್ಣ ಪುಣ್ಯದ ಮೂರ್ತಿಬಾರೈ ಚನ್ನಿಗನೆ ಬಾರೋ ।**

ಎಂಬುದಾಗಿ ಮನದುಂಬಿ ಕಂಣ್ತುಂಬಿ ಕರೆಯುವ ನುಡಿಗಳಿಗೆ ನಲ್ಗೆಜ್ಜೆಗಳ ರವದಿಂ ಕುಣಿಯುತ್ತ ಬರುವ ಮಗನನ್ನು ಕಂಡು ಸಂಗಮ್ಮನು ಬರಸೆಳೆದು ಮುದ್ದಿಟ್ಟು ತೊಡೆಯ ಗದ್ದುಗೆಯನ್ನು ದಯಪಾಲಿಸುತ್ತಿದ್ದಳು.

ಹೀಗೆ ನಾಲ್ಕು ವರುಷಗಳು ಕಳೆಯುತ್ತಲೇ ಬಾಲ ಶರಣನ ವಿದ್ಯಾಭ್ಯಾಸಕ್ಕೆ ಏರ್ಪಡಿಸಿದರು. ಶರಣ ಬಸವೇಶ್ವರನ ಗುರುಗಳಾದ ಕಲಕೇರಿ ಹಿರೇಮಠದ ಮರುಳಸಿದ್ಧದೇವರು ಕಾಲಾನುಕ್ರಮದಲ್ಲಿ ಮಲತ್ರಯಗಳನ್ನು ಕಳೆದು ಶಿವಕಳೆಯನ್ನು ತುಂಬುವ ದೀಕ್ಷೆಯನ್ನು ಬಾಲ

ಶರಣನಿಗೆ ಕೊಟ್ಟರು. ಅಂದಿನಿಂದ ಗುರುಪುತ್ರನಾಗಿ ಶರಣಬಸವನು ಲಿಂಗಾರ್ಚನೆಯನ್ನೈಯುತ್ತ ಶಿವಯೋಗಶಕ್ತಿಯನ್ನು ಪಡೆಯತೊಡಗಿದನು.

ಬಾಲಯೋಗಿ ಶರಣಬಸವೇಶ್ವರನು ದಿನದ ಲಿಂಗಾರ್ಚನೆಯ ಭರದಲ್ಲಿ ಊಟ ಉಪಚಾರವನ್ನೇ ಮರೆಯತೊಡಗುವನು. ಹೀಗೆ ದಿನಗಳೆದ ಬಳಿಕ ಮೆಲ್ಲ ಮೆಲ್ಲನೆ ಬೇಡಿಗುದ ಕೊಡಬಲ್ಲ ಶಕ್ತಿಯನ್ನು **ಶರಣಬಸವೇಶ್ವರನು** ಪಡೆದುಕೊಳ್ಳುವನು. ಆಗ ಗುರುಗಳಾದ **ಮರುಳಸಿದ್ಧದೇವರು "ಮೊಶಾಲ"** ಗ್ರಾಮದ ಭಾವೀಮನಿ **ಶಾಂತಲಿಂಗಪ್ಪನವರ** ಮಗಳಾದ "**ಮಹಾದೇವಿ**" ಯನ್ನು ನಮ್ಮ ಚರಿತ್ರನಾಯಕನಾದ ಶ್ರೀ ಶರಣಬಸವೇಶ್ವರನಿಗೆ ಲಗ್ನ ಮಾಡಿದರು. ಸತಿ–ಪತಿಗಳೀರ್ವರೂ ಒಮ್ಮನಸ್ಸಿನಿಂದ ತ್ರಿಕಾಲ ಲಿಂಗ ಪೂಜಾದಿ ವ್ರತನೇಮಾದಿಗಳನ್ನು ಕೈಕೊಂಡು ದಾಸೋಹ ನಡಿಸುತ್ತಿರುವಲ್ಲಿ "**ಅರಳಗುಂಡಿಗಿ**" ಎಂಬ ಗ್ರಾಮವು ಈ ಪ್ರಕಾರ ಕಂಗೊಳಿಸಹತ್ತಿತು.

**ಪದ್ಯ || ಲಿಂಗದಿಂ ಕಂಗೊಳಿಪ ಪರಮ ಭವನಂಗಳಿಂ |**
**ತುಂಗ ಫಲಭಾರದಿಂ ಬಗ್ಗುತಿಹ ಬನಗಳಿಂ |**
**ಸಂಗತಾಮಲ ಪುಷ್ಪ ಪರಿಮಳದ ವನಗಳಿಂ ನಿರ್ಝರದ ಕೊಲ್ಕಗಳಿಂ ||**
**ಸಿಂಗದಲೆ ನೆರೆ ಹರಿವ ಪರಮ ಪೆರ್ದೊರೆಗಳಿಂ |**
**ಮಂಗಲ ಮಹಾ ತಪೋಧನರಿರ್ಪ ಗಿರಿಗಳಿಂ |**
**ಬಂಗದಿಂ ಕಂಗೊಳಿಪ ಪದ್ಮಾಕರಂಗಳಿಂ ಸಗರನಾಡ್ ಕಣ್ಗೆಸೆದುದು || ೧ ||**

ಕರ್ನಾಟಕ ದೇಶದ ಈ ವರ್ಣನೆಯನ್ನು ಓದುವಾಗ ಯಾವ ಕಲ್ಪನೆಯೂ ಉಂಟಾಗುವದಿಲ್ಲ. ಮುಂದೆ ಚರಿತ್ರನಾಯಕನಾದ ನಮ್ಮ ಶರಣಬಸವೇಶ್ವರನು ಕಲ್ಬುರ್ಗಿಯಲ್ಲಿ ನಿಂತು ಮಿಂಚುವ ಮಹಾ ಬೆಳಗಿನೊಳು ಬೆರೆದು ಲಿಂಗ ಸಾಮರಸ್ಯವನ್ನು ಹೊಂದಿ ಅನಂತ ಲೀಲೆಗಳನ್ನು ತೋರಿದಾಗ ಮೇಲಿನ ಪದ್ಯವು ಅರ್ಥವಾಗದಿರದು. ಪರಶಿವ ಸೃಷ್ಟಿಯಾದ ಭೂತಳದಲ್ಲಿ ಪರಮ ಪವಿತ್ರಕರವಾದ ಸಗರನಾಡು ಪ್ರದಾಯಕದ ದೇಶ ಮಧ್ಯದಲ್ಲಿ ರಾರಾಜಿಸುತ್ತಿತ್ತು.

ಶ್ರೀ. ಶರಣಬಸವೇಶ್ವರನು ಅಮರಗುಂಡ ಕೊಳ್ಳದ ಅಮರೇಶ್ವರನಲ್ಲಿ ಜಂಗಮರ ಆರಾಧನೆಯನ್ನು ಹಮ್ಮಿದನು. ಒಳ್ಳೇ ಭಯ–ಭಕ್ತಿಯಿಂದ, ಕರಿಗಡಬು, ಪಾಯಸ, ಪರಡಿ, ಸಣ್ಣಕ್ಕಿಬೋನ, ಖೀರು, ಕರ್ಜೀಕಾಯಿ, ಹೋಳಿಗೆ, ಮೊದಲಾದ ಪರಮಾನ್ನಗಳನ್ನೂ ತುಪ್ಪ ಹಾಲು ಮೊದಲಾದ ರಸಪದಾರ್ಥಗಳನ್ನೂ ಸಿದ್ಧಪಡಿಸಿದ್ದನು. ಪಕ್ಕಿಗಳೇ ಹಡೆದವೆಂಬಂತೆ ಎಲ್ಲ ಕಡೆಯಿಂದ ಜಂಗಮರ ಗುಂಪುಗಳು ಬಂದು ಬಂದು ದೇವಾಲಯದಲ್ಲಿ ಸೇರಿದವು. ಶಿವಪೂಜಾನಂದದಿಂದ ಊಟವೂ ಪ್ರಾರಂಭವಾಯಿತು. ಅಸಂಖ್ಯ ಜನಸ್ತೋಮ ಕೂಡಿದ್ದರಿಂದ ತುಪ್ಪವೂ ತೀರಿಹೋಯಿತು. ಆಗ ನಮ್ಮ ಶರಣಪ್ಪನು ಹತ್ತು ಕೊಡ ಅಮರಗುಂಡದ " ಗುಂಡಿಯ " ನೀರನ್ನು ತರಿಸಿ, ಪಾದೋದಕವನ್ನು ಪ್ರೋಕ್ಷಿಸಲಾಗಿ ಹತ್ತು ಕೊಡ ತುಪ್ಪವಾಯಿತು. ಅದನ್ನು ಬಳಸಹತ್ತಿದರು. ಭಯ–ಭಕ್ತಿಯ ಭಿನ್ನಾಯವಾದದ್ದರಿಂದ ಎಲ್ಲರೂ ಇಚ್ಛಾಭೋಜನವನ್ನು ಯಥೇಚ್ಛವಾಗಿ ಮಾಡಿದರು, ಆ ಬಳಿಕ ಶರಣಬಸವೇಶ್ವರನು ಎಲ್ಲ ಗಣಂಗಳಿಗೂ ವಸ್ತ್ರಾಭರಣಗಳನ್ನೂ ದಕ್ಷಿಣೆಯನ್ನೂ ಕೊಟ್ಟು, ಸಂತೋಷಪಡಿಸಿದನು. ಆಗ ಅಮರೇಶ್ವರನ ಮಹಿಮೆಯನ್ನೂ ಶರಣಬಸವೇಶ್ವರನ ಭಕ್ತಿಯನ್ನೂ ಪಾತಾಳ ಲೋಕಕ್ಕೆ ತಿಳುಹಿಸಬೇಕೆಂದು ಹೋದನೋ ಎಂಬಂತೆ ಸೂರ್ಯನು ಕೆಳಗಿಳಿದನು. ರವಿಯಿಂದ ತಿಳಿದು ಅಮರೇಶ್ವರನ ಪಾದದರ್ಶನಕ್ಕೆ ಬರುವ ಸರ್ಪಗಳ ಕಾಂತಿಯೋ ಎಂಬಂತೆ ಸಂಧ್ಯಾರಾಗವು ತೋರಹತ್ತಿತು. ತಲೆಬಾಗಿಸಿದ ಕಮಲದಿಂದ ಹುವ್ವಿನ ಹುಡಿಯೂ ಬಿತ್ತು. ಅದು ಗಂಡನ ಮರೆಯಾದ ತನಗೆ ಸೌಭಾಗ್ಯ ಬೇಡೆಂದು ಕಮಲಿನಿಯು ತಾಂಬೂಲವನ್ನು ಉಗುಳುವಂತೆ ತೋರಹತ್ತಿತು. ಬೆಳದಿಂಗಳು ಹಾಲುಸಮುದ್ರದಂತೆಯೂ ಚಂದ್ರನು ನಾವಿಕನಂತೆಯೂ ಚಿಹ್ನವು (ಕಪ್ಪು) ತನ್ನ ಹಡೆದವಳ ತವರನ್ನು ನೋಡಬಂದ ಕಾಮನಂತೆಯೂ ಬಹು ಮನೋಹರ

ವಾಗಿ ತೋರುತ್ತಿತ್ತು. ಇಂಥ ಮನೋಹರವಾದ ದಿನದಿಂಗಳು ಬರುವಾಗ **ಶ್ರೀಗಳಾದ ಮರುಳಸಿದ್ಧದೇವರ** ಅಪ್ಪಣೆಯಂತೆ **ಶರಣಬಸವೇಶ್ವರನಿಗೆ ದ್ವಿತೀಯ ವಿವಾಹವೂ "ಚೆನ್ನಬಸವಮ್ಮ" ನವರೊಡನೆ ನೆರವೇರಿಸಲ್ಪಟ್ಟಿತು.**

ಹೃದಯದಲ್ಲಿಯ ಆನಂದ ರಸವು ಉಕ್ಕಿ ಹೊರಚೆಲ್ಲುವದೋ ಎಂಬಂತೆ ಕೊಳ್ಳದ ಅಮರಗುಂಡದ ಶಿವಲಿಂಗವಾದ ಅಮರೇಶ್ವರನ ನೇತ್ರದ್ವಯದಿಂದ ಆನಂದ ಭಾಷ್ಪಗಳು ಸುರಿಯುತ್ತಿದ್ದವು. ಶ್ರೀ ಮರುಳಸಿದ್ಧದೇವರು ಶರಣಬಸವೇಶ್ವರನನ್ನು ಕರೆದು ಶಿವಲಿಂಗ ಮೂರ್ತಿಯ ಚಿತ್ತದಲ್ಲಿ ನೆಲೆಗೊಳಿಸಿದರು. ತಕ್ಷಣವೇ ಪರಮಪೂಜ್ಯ ಅಮರಲಿಂಗನು ಶರಣನಿಗೆ ಪ್ರತ್ಯಕ್ಷನಾಗಿ ಭಸ್ಮಧೂಳಿತನನ್ನು ಕೊಟ್ಟು ನಂಬಿಕೆಯನ್ನಿತ್ತು ಕರುಣದಿಂದ ನೋಡಿ, ನೆನೆಸಿದಾಗ ಕನಸಿನಲ್ಲಿರುವೆ ನೆಂದು ಅಭಯವಿತ್ತು ಬಯಲಾದನು.

ಕಂಡೂಕಾಣದಂತಾದ ಅಮರೇಶ್ವರನು ಬೈಲಾಗಲಾಗಿ, ಶ್ರೀ. **ಮರುಳಸಿದ್ಧದೇವರೂ, ಶರಣಬಸವೇಶ್ವರನೂ, "ಮಹಾದೇವಮ್ಮ, ಹಾಗೂ ಚೆನ್ನಬಸವಮ್ಮ"** ನವರೂ ಅಖಿಲ ಗಣಸಮೂಹ ದೊಡನೆ ತಮ್ಮ ಗ್ರಾಮಕ್ಕೆ ಹೊರಟುಹೋದರು. ಕೆಲವು ದಿನಗಳ ಮೇಲೆ ಶರಣಬಸವೇಶ್ವರನ ಬಂಧುಗಳಲ್ಲಿ ವೈಮನಸ್ಸಾಗಿ, ಶರಣನಿಗೆ ಪಾಲು ಕೊಟ್ಟು ಬೇರೆ ಬೇರೆಯಾದರು. ಯಾಕೆಂದರೆ ಶರಣಪ್ಪನು ಮಾಡುವ ದಾಸೋಹವನ್ನೂ ಕೊಡುವ ದಾನ-ಧರ್ಮಾದಿಗಳನ್ನೂ, ಅತಿಥಿಗಳಿಗಾಗಿ ಮಾಡುವ ಖರ್ಚು-ವೆಚ್ಚಗಳನ್ನೂ ಸಹಿಸಲಾರದೆ, ಅವನ ಘನಕೀರ್ತಿ ಯನ್ನು ನೋಡಿ ಅಸೂಯೆಯಿಂದ ಕಡೆಗಾಗಿದರು.

ಶರಣನಿಗೆ ಒಂದು ಹಾಳುಮನೆ, ಕರಕೀಕೂಡಿದ ಒಂದು ಬೀಳು ಹೊಲವನ್ನೂ, ಹಂಚಿಕೊಟ್ಟರು. ಅದನ್ನೇ ತೆಗೆದುಕೊಂಡು ತನ್ನ ಪಾಲಿಗೆ ಬಂದ ಬೀಳುಹೊಲದ ನಾಲ್ಕೂಮೂಲೆಗಳಿಗೆ ನಾಲ್ಕು ಸೀರು

ತುಂಬುವ ರಂಜಣಿಗೆಗಳನ್ನು ಕಟ್ಟಿಸಿ, ಅವುಗಳಲ್ಲಿ ತಾನೂ ತನ್ನ ಕೈಹಿಡಿದ ಸತಿಯರೀರ್ವರೂ ಕೂಡಿ ದಿನಾಲು ನೀರುತುಂಬಿ ಪಶು-ಪಕ್ಷಿ ಗಳಿಗೆ ನೀರು ಕುಡಿಸುತ್ತಿದ್ದರು.

**ಪದ್ಯ॥ ಇಳಿಹಾಳ ಬೊಮ್ಮಯ್ಯ ಹೊಲಗೆಲಸ ಕಾಯಕವ ।**
**ನಲುಮೆಯಲಿ ಸುಗ್ಗಿ ದಾಸೋಹ । ಹರಸೇವೆ ।**
**ಸಲಿಸಿ ಲಿಂಗದೊಳು ಬಯಲಾದ ॥೧॥**

ಎಂಬಂತೆ ಒಕ್ಕಲಿಗನಿಗೆ ಹೊಲಗೆಲಸವೇ ಕಾಯಕ; ಸುಗ್ಗಿಯೇ ದಾಸೋಹ, ಹರಸೇವೆ ಹಂಗಿಲ್ಲದ ಉದ್ಯೋಗವೆಂದರೆ ಒಕ್ಕಲುತನ. ನಿಸರ್ಗವು ದಯಮಾಡಿದರೆ ಸಾಕು. ಒಕ್ಕಲಿಗನ ಹನ್ನೆರಡು ತಿಂಗಳ ಕಾಯಕವೇ ದಾಸೋಹವೆಂದೂ ಒಕ್ಕಲಿಗನೇ ಕೊಡುಗೈ ಧುರೀಣ ನೆಂದೂ ತಿಳಿದುಕೊಂಡಿದ್ದ ಶರಣಬಸವೇಶ್ವರನು ತನ್ನ ಪಾಲಿಗೆ ಬಂದ ಹೊಲವನ್ನು ತನ್ನೂರ ಲಿಂಗಾಂಗಿಯಾದ ಕುರುಬರ ಸಗರಪ್ಪನಿಗೆ ಕೋರಿ ನಿಂದ ಸಾಗುವಳಿಗಾಗಿ ಕೊಟ್ಟು, ತಾನೂ ಸಗರಪ್ಪನೊಡನೆ, ದಿನಾಲು ಒಂದೆರಡು ತಾಸು, ಹೊಲದಲ್ಲಿ ದುಡಿಯಹತ್ತಿದನು. ಮುಂದೆ ಮಳೆಗಾಲ ಪ್ರಾರಂಭವಾಗಿ ಸಗರನಾಡಿಗೆ ಸರ್ವೋತ್ಕೃಷ್ಟ ಮಳೆಯಾಗಿ, ಭೂಮಿಗಳು ಹಸಿಯಾದವು. ಆಗ ಆರಳಗುಂಡಿಗೆಯ ಒಕ್ಕಲಿಗರು

**ಪದ್ಯ ॥ ಅಡವಿಪೂಜೆಯುಮಾಡಿ ಎಡೆಮಾಡಿ ಕೂರಿಗೆಗೆ ।**
**ಒಡೆಯುಗೊಲ್ಲಾಳಬಿತ್ತಿದರೆ । ಮಳೆಯಾಗಿ ।**
**ಕಡೆರಾಶಿ ತುಂಬಿ ಕೈಸೋತು ॥೨॥**

ಎಂಬಂತೆ ಶರಣಬಸವೇಶ್ವರನ ಹೊಲವನ್ನು ಮಾಡುತ್ತಿದ್ದ ಕುರುಬರ ಸಗರಪ್ಪನಿಂದ ಅಡವೀಪೂಜೆಯನ್ನೂ ಕೂರಿಗೆಯ ಪೂಜೆ ಯನ್ನೂ ಮಾಡಿಸಿದರು. ಸಗರಪ್ಪನಿಂದಲೇ ಶರಣಬಸವೇಶ್ವರನ ಹೊಲ ವನ್ನು ಮೊದಲು ಮಾಡಿಸಿದರು. ಕುರುಬರ ಸಗರಪ್ಪನು ಬಿತ್ತಲಿಕ್ಕೆ ಪ್ರಾರಂಭಮಾಡಲಾಗಿ, ಶರಣಬಸವೇಶ್ವರನು ಬೆಳೆಸಾಲು ಹೊಡೆಯುತ್ತ

ಈ ಪದ್ಯವನ್ನು ಬಹು ಸ್ವಾರಸ್ಯವಾಗಿ ಹಾಡಿದ್ದಾನೆ. (ಕುರುಬರ ಸಗರಪ್ಪನ ವಂಶಜರಾದ ಪ್ರಸಿದ್ಧ ಪಂಚಾಂಗಕರ್ತರಾದ ಸಾಂತಪ್ಪಾಜಿ ಉಸ್ಕಿಹಾಳ ಇವರಿಂದ ಈ ಸಂಗತಿಯು ನನಗೆ ಗೊತ್ತಾಯಿತು.)

ಪದ್ಯ|| ಮೂತಾಳ ಕೂರಿಗೆಗೆ ಯಾತರದು ಹಂಗಿಲ್ಲ |
ಭೂತಾಯಿ ಬೆಳೆಯೆ ಒಕ್ಕಲಿಗ | ಜಗದೊಳಗೆ |
ಕೋತುಳ್ಳಮೇಲೆ ಬಲಗೊಂಡ ||೩||
ಕಡೆಯಬಲಕಿನ ತಾಳು ಎಡೆಯಾಯ್ತು ರಸನಿಗೆ |
ಎಡಗಡೆಯ ತಾಳು ಪಶು-ಪಕ್ಷಿ | ಜೀವನಕೆ |
ನಡುವಿನಾತಾಳು ರೈತನಿಗೆ ||೪||
ಒಂದುತಾಳಿನ ಬೆಳೆಯು ಬಂದವರಿಗಿಲ್ಲೆನ್ನ |
ಮುಂದು ಕೊಡುಗೈಯು ಒಕ್ಕಲಿಗ | ನಾಡೊಳಗೆ |
ಹೊಂದಿ ದಾಸೋಹ ಶಿವಮತಕೆ ||೫||

ಈ ಪ್ರಕಾರವಾಗಿ ಹಾಡುತ್ತ ಬೆಳೆಸಾಲು ಹಸನಾಗಿ ಹೊಡೆಯುತ್ತ ಕುರುಬರ ಸಗರಪ್ಪನಿಗೆ ಹೀಗೆ ಹೇಳಿದ್ದಾನೆ. ತಮ್ಮಾ ನಮ್ಮ ಒಕ್ಕಲಿಗರ ಗಳಿಕೆಯು ಎಲ್ಲರಿಗೂ ಹಂಚಿಹೋಗುವದಪ್ಪಾ; ಒಕ್ಕಲಿಗರು ಜಿಪುಣರಾದರೆ ಜೀವರಾಶಿಯು ಬದುಕುವ ಬಗೆ ಹೇಗಪ್ಪಾ; ಈ ಪ್ರಕಾರ ಪೋಷಿಸುತ್ತ ತಮ್ಮಾ ಈ ವರ್ಷ ಚನ್ನಾಗಿ ಬೆಳೆಬಂದು ಉತ್ಕೃಷ್ಟಕಾಣಾಗುವದು. ನಾನಾಬಗೆಯ ಪಕ್ಷಿಗಳು ಕಾಳಾದ ತೆನೆಯಮೇಲೆ ಕೂತು ಹೊಟ್ಟೆತುಂಬ ಮೆಯ್ದು ನಾನು ಕಟ್ಟಿಸಿರುವ ರಂಜಣಿಗೆಯಲ್ಲಿ ದಿನಾಲು ನಾವು ಹಾಕುತ್ತಿರುವ ನೀರನ್ನು ಕುಡಿದು ಆನಂದದಿಂದ ತಾವಾಗಿಯೇ ಹಾರಿಹೋಗಲಿ. ನೀನು ಮಾತ್ರ ಮಂಚಿಗೆಹಾಕಿ ಹೊಲವನ್ನು ಕಾಯ್ದು ಪಕ್ಷಿಗಳನ್ನು ಕವಣೆಯಿಂದ ಹೊಡೆದು ಪಾಪಕಟ್ಟಿಕೊಳ್ಳಬೇಡಪ್ಪಾ. ಪಕ್ಷಿಗಳು ಎಲ್ಲ ಹೊಲವನ್ನು ಮೆಯ್ದು ಬರೀ ಕಂಕಿಗಳನ್ನು ಬಿಟ್ಟರೂ ಕೂಡಾ ಚಿಂತಿಸಬೇಡಪ್ಪಾ. ಎಂಬುದಾಗಿ ಹೇಳಿ ಜ್ಞಾನವೆಂಬ ಅಮೃತವನ್ನು ಕೊಟ್ಟು, ಭಕ್ತಿಯೆಂಬ ಬೀಜವನ್ನು ಬಿತ್ತಿ ಕಡೆಗಾದನು.

ಮರುದಿನವೆ ಅರಳಗುಂಡಿಗಿ ಏಕೆ....? ಇಡೀ ಸಗರನಾಡಿನವರೇ ಕೂರಿಗೆಯನ್ನು ಹಾಕಿದರು. ಅದರಂತೆ ಅಂದಿನಿಂದ ಇಂದಿನವರೆಗೂ ನಮ್ಮ ಕರ್ನಾಟಕದ ಒಕ್ಕಲಿಗರು, ಕುರುಬರಿಂದ ಕೂರಿಗೆಯನ್ನು ಮೊದಲು ಮಾಡಿಸಿದ ತರುವಾಯ ಬಿತ್ತುವ ಸಾಂಪ್ರದಾಯವನ್ನು ರೂಢಿಯಲ್ಲಿ ತಂದಿರುವರು.

ಪದ್ಯ॥ ಗುಂಡತಿಗರಿಯ ತಿರುವಿ ರುಂಡವಾರಿಯುಕುಣಿದು ।
ಥಂಡಿಬೀಳುತಲಿ ಬೆಳವಲಕೆ । ಕುಂಬಾರ ।
ಗಿಂಡಿರಸಗಾಳಿ ಬೀಸುತಲಿ ॥೬॥

ಎಂಬಂತೆ, ಕುಂಬಾರಗಾಳಿ ಬೀಸಲಾರಂಭಿಸಿ ವಿಶೇಷ ಛಳಿಯೂ ಬಿದ್ದು ಸರ್ವೋತ್ಕೃಷ್ಠ ಬೆಳೆಗಳೂ ಬಂದವು. ಆಗ ನಮ್ಮ ಶರಣಬಸವೇಶ್ವರನು,

ಪದ್ಯ॥ ಬೆಚ್ಚಗಡಿಗೆಯಗುಂಡ, ನುಚ್ಚು ಜೋಕನುಚರಗ ।
ಬೆಚ್ಚಾರೆ ಹೊಲಕೆ ಒಕ್ಕಲಿಗ । ಚರಗೊಗೆದು ।
ಬಚ್ಚಿಡಲು ಹುಲಸು ಹೊಲದೊಳಗೆ ॥೭॥

ಎಂಬಂತೆ, ಭೂಮಿಯನ್ನು ಬಿತ್ತಿದಮೇಲೆ ಸಸಿಯೆದ್ದು ಹೊಡೆ ಹೊರುವ ಸಮಯದಲ್ಲಿ ಕುಂಬಾರ ಗುಂಡಯ್ಯನ ಮಡಿಕೆಯನ್ನು ಪೂಜೆ ಮಾಡಿ ಜೋಕಪ್ಪನ ಅಳಕ ಅಂಬಲಿ ( ಹುಳಿನುಚ್ಚು ) ಚರಗವನ್ನು ಒಗೆದು, ಹೊಲದಮಧ್ಯದಲ್ಲಿ ಯಕ್ಕಿಯಗಿಡದಕೋಲಿಗೆ ಗಡಿಗೆಯನ್ನು ಸುಣ್ಣಬಡಿದು ಡಬ್ಬಹಾಕಿಸಿದನು. ಅದಕ್ಕೆ ಬೆಚ್ಚೆಂದು ಕರೆದನು. ಈಗ ಮಾತ್ರ " **ಬೆಚ್ಚು** " ಈ ಶಬ್ದದ ಬದಲಾಗಿ " **ಬೆದರು** " ಎಂಬುದಾಗಿ ಒಕ್ಕಲಿಗರು ಕರೆಯುತ್ತಾರೆ.

ಆ ಕಾಲದಲ್ಲಿ ನಮ್ಮ ಶರಣಬಸವೇಶ್ವರನು ಮಹಾಶಿವಶರಣ ಕುಂಬಾರ ಗುಂಡಯ್ಯನ ಸಮರಸಭಕ್ತಿಯು ಅಮರವಾಗಿ ಉಳಿಯಲೆಂದು, ಗುಂಡಯ್ಯನನ್ನು ಬೆಚ್ಚೆಂದು ಪೂಜೆಮಾಡಿದಮೇಲೆ ಬೆಳೆಯು

ಬಚ್ಚಾದರೇನು....? ಕಣಉಕ್ಕಿ ದೊಡ್ಡರಾಶಿಯಾಗುವದೆಂದು ಹೇಳಿ ತನ್ನ ಹೊಲವನ್ನು ಮಾಡುವ ಸಗರಪ್ಪನಿಗೆ ತಮ್ಮಾ ಬನದ ಹುಲಸನ್ನು ಕುಂಬಾರ ಗುಂಡಯ್ಯನ ಸಮರಸ ಶಿವಭಕ್ತಿಯ ಮಡಿಕೆಯಲ್ಲಿ ಮುಚ್ಚಿಟ್ಟರೆ ಅದು ಹೊಲಬಿಟ್ಟು ಹಾರಿ ಹೋಗಲಾರದೆಂಬ ಮುಗ್ಧಭಾವನೆಯನ್ನು ಹುಟ್ಟಿಸಿ ಶಿವಭಕ್ತ ಶಿವಶರಣರ ಶಿವಭಕ್ತಿಯೇ ಮಿಗಿಲೆಂದು ನಿರೂಪಿಸಿದನು.

ಆ ವರ್ಷ ಇಡೀ ಸಗರನಾಡು ಸರ್ವೋತ್ಕೃಷ್ಟ ಬೆಳೆಯಿಂದ, ತುಂಬಿ ಒಡಿಗೆ ಅಮರಲಾರದಷ್ಟು ತೆನೆಯಾಗಿ, ಮುತ್ತಿನಂಥಕಾಳಾಗಿ, ನಿಲುವು ಹುಲುಸಾಗಿ ಕಂಗೊಳಿಸ ಹತ್ತಿತು. ನಮ್ಮ ಶರಣಬಸವೇಶ್ವರನ ಹೊಲವನ್ನು ಪಶು–ಪಕ್ಷಿಗಳು ಹೊಟ್ಟೆತುಂಬ ಮೇಯ್ದು ಶರಣಬಸವೇಶ್ವರನು ಕಟ್ಟಿಸಿ ನೀರು ಹಾಕುತ್ತಿದ್ದ ರಂಜಣಿಗೆಯಲ್ಲಿ ನೀರು ಕುಡಿದು ಹೋಗುತ್ತಿದ್ದರಿಂದ ಬರೀಕಂಕಿಯ ನಿಲುವೇ ಹೊಲ ತುಂಬ ಕಾಣುತ್ತಿತ್ತು. ಆದರೂ ಸಗರನಾಡಿನವರು ನಿಲುವಿಗೆ ಕುಡಗೋಲನ್ನು ಹಾಕಿದರು. ಕುರುಬರ ಸಗರಪ್ಪನೂ ಪದ್ಧತಿಯಂತೆ ಶರಣಬಸವೇಶ್ವರನ ಹೊಲಕ್ಕೆ ಕುಡಗೋಲನ್ನು ಹಾಕಿಸಿ, ನಿಲುವು ಕೊಯ್ದು ಗೂಡು ಬಡಿದನು. ಆರಳಿ ಗುಂಡಿಗೆಯ ಒಕ್ಕಲಿಗರೆಲ್ಲರೂ ತೆನಿ ಮುರಿಯಲಿಕ್ಕೆ ಹತ್ತಿದರು. ಅವರಂತೆ ಕುರುಬರ ಸಗರಪ್ಪನೂ, ಶರಣಬಸವೇಶ್ವರನ ಹೊಲದಲ್ಲಿ ಬಚ್ಚ ತೆನೆಗಳುಳ್ಳ ಗೂಡುಗಳನ್ನು ಬಿಚ್ಚಿ ತೆನೆ ಮುರಿಸಿ ಕಣಾ ಮಾಡಿದನು. ಆಗ ನಮ್ಮ ಶರಣಬಸವೇಶ್ವರನು ಸಗರಪ್ಪನನ್ನು ಕುರಿತು ಹೀಗೆ ಬೋಧಿಸಿದ್ದಾನೆ.

**ಪದ್ಯ || ಕಾಣವೆ ಮಂಟಪವಾತೋ ಗುಣವಂತ ಬಸವೇಶ |**
**ಪೊಣೆಗಾರ ಕೈತ ದಂಡೇಶಾ ' ಕಣಾಮೇಟಿ '**
**ಗಣೆ ಗುರುವು ಕಣಕೆ ಪ್ರಭುಲಿಂಗ || ೮ .**

ಸಗರಪ್ಪಾ ಇಲ್ಲಿ ಕೇಳು ಕಣವೇ ಕಲ್ಯಾಣ ಮಂಟಪವು ಪರಮ ಚಿತ್ಕಳೆ ಪ್ರಭು ಬುದ್ಧಿವಂತ ಲಿಂಗಬೂದ. ಮೇಟಿಯೇ ಚೆನ್ನಬಸವಣ್ಣ, ಶಾಂತಿ

ಗಣ್ಣಿಯೇ ಪಾದರ ಚನ್ನಣ್ಣ, ಒಕ್ಕಲಿಗನೇ ದಾಸೋಹಿ ಬಸವಣ್ಣ, ಕಣದ ಬಂಟರೇ ನೂರೊಂದು ಶಿವ ಶರಣರು, ತೂರುವ ಪುಟ್ಟಿ ತ್ರಿವಿಧಲಿಂಗ, ತೂರಿದ ರಾಶಿಯೇ ವಚನರಾಶಿ, ಡೋಹರ ಕಕ್ಕಯ್ಯನೇ ಸೆಳ್ಳು, ಎಂಟು ಕಟ್ಟೆ ನಿಕ್ಕಲಿಯನ್ನೊಳಗೊಂಡ ರಾಶಿಯ ಕಣವೇ ಅಷ್ಟಾವರಣ ಬದ್ಧ ವಿಶ್ವಧರ್ಮ, ಮುದ್ದುಕಾಯಕವೇ ಒಕ್ಕಲುತನ, ಸುಗ್ಗಿಯೇ ದಾಸೋಹದ ಆರಾಧನೆಯ ದಿನಗಳು, ಎಂಬಲಿ, ಅಂಬಲಿ, ಶಿವದಾನದ ಗುರ್ತು ಇದಕ್ಕೆ ಹೊಣೆಗಾರ ಒಕ್ಕಲಿಗ ದಾಸೋಹಿ ಬಸವಣ್ಣ, ಇದಕ್ಕೆ ಗಣಯಾದ ಪೀಠಾಧಿಕಾರಿ ಗುರು ಪ್ರಭುವೆಂದರೆ ಕಣದೊಳಗಿನ ಬುದ್ಧಿವಂತ "**ಬೂದ**" ಲಿಂಗನೆಂದು ತಿಳಿಸಿ ಕೊಟ್ಟು ಸಗರಪ್ಪನಿಂದ ಕಣಾ ಮಾಡಿಸಿ, ಮೇಟೀ ಕಟ್ಟೆಗೆಯನ್ನು ನಡಸಿ ಮೇಟೀ ಕಟ್ಟೆಗೆಯನ್ನು ಹೂಳುವದಕ್ಕಾಗಿ, ತೆಗೆದಿದ್ದ ಗುದ್ದಿನ ಮಂಣನ್ನು ತನ್ನ ಹೊಲದ ನಾಲ್ಕೂ ದಾರಿಗಳ ಮೇಲೆ ಕತ್ತರಿಗೀಟು (ಸ್ವಸ್ತಿಕ ಚಿನ್ಹ) ಹಾಕಿಸಿದನು. ಅದರ ಮರ್ಮವನ್ನು ಸಗರಪ್ಪನಿಗೆ ಹೀಗೆ ಹೇಳಿದ್ದಾನೆ. ತಮ್ಮಾ ಮೇಟೀ ಕಟ್ಟೆಗೆಯ ಸಲುವಾಗಿ, ತೆಗೆದ ಗುದ್ದಿನ ಹಸೀಮಣ್ಣನ್ನು ಹಾದಿಗೆ ಹಾಕಿದರೆ ಹಾದಿಗೆ ಔತಣ ಕೊಟ್ಟಂತೆ ತಿಳಿದುಕೊಳ್ಳಬೇಕು. ಯಾಕಂದರೆ ಸುಗ್ಗಿಯ ದಾಸೋಹ ನಡೆದವೆ. ಕೊನೆಯ ರಾಶಿಯ ದಿನಗಳು ಸುರುವಾದವು. ಜೋಗಿ, ಜಂಗಮ, ಬಡವ, ಲಿಂಗಹೀನ, ಆಯಗಾರರೆಲ್ಲರೂ, ಕಣಕ್ಕೆ ಬಂದು ಒಕ್ಕಲಿಗನು ಕೊಡುವ ದಾನವನ್ನು ಒಯ್ಯಬೇಕೆಂದು ಹಾದಿಗೆ ಹಾಕುವ ಹಸೀ ಮಂಣಿನ ಚಿನ್ಹವೇ ಹಾದಿಗೆ ಕೊಟ್ಟ ಔತಣವೆಂದು ತಿಳಿಸಿದನು. ಅದರಂತೆ ಈಗಲೂ ಕಣಾ ಮಾಡಿ ಮೇಟೀ ಕಟ್ಟೆಗೆಯನ್ನು ಹೂಳಿ, ಅದರ ಹಸೀ ಮಂಣನ್ನು ಹಾದಿಗೆ ಹಾಕುವ ಸಾಂಪ್ರದಾಯವು ರೂಢಿಯಲ್ಲಿ ಬಂದಿರುವದು. ನಮ್ಮ ಒಕ್ಕಲಿಗ ಬಂಧುಗಳಲ್ಲಿ

**ಪದ್ಯ ॥ ಸುಂಕ ರೂಪದ ತೆನೆಯ ಶಂಕೆಯಿಲ್ಲದೆ ಮುರಿಸಿ ।**
**ಕಂಕಣವ ಕಟ್ಟಿ ಸಗರಪ್ಪ । ಹಾಕಿಸಲು ।**
**ಕಂಕಿ ಹುಲುಸಾಗಿ ಕಣ ತುಂಬಿ ॥ ೯ ॥**

ಆಗ ಸಗರಪ್ಪನು, ಬಚ್ಚತೆನಿಗಳುಳ್ಳ ಸುಂಕೆ ರೂಪವಾದ ತೆನಿಗಳನು ಮುರಿಸಿ, ಇಂಡಿಗಿ ಕಟ್ಟಿಹಾಕಿಸಿದನು. ನೋಡುವವರಿಗೆ ಕಂಕಿಯು ಭಯಂಕರವಾಗಿ ಕಾಣಹತ್ತಿತು. ತುಂಬಾ ಹುಲುಸಾಯಿತು. ಹಂತೀ ಕಟ್ಟಿ ಆನಂದದಿಂದ ತುಳಿಸುತ್ತಿರುವಾಗ ಬರೀ ಬಚ್ಚತೆನೆಗಳ ಗರ್ಭದಿಂದ ಮುತ್ತಿನಂಥ ಕಾಳುಗಳು ಉದರ ಹತ್ತಿದವು. ಆಗ ಶರಣಬಸವೇಶ್ವರನು ಹೀಗೆ ಹಾಡಿದ್ದಾನೆ.

**ಪದ್ಯ || ಸುಂಕೆ ರಾಶಿಯು ಕಣಕೆ ಸಂಕದೇವನ ಬಲವು |**
**ಕಂಕಿಯಾ ಕಣಕೆ ನಿನ ಬಲವು | ಮಹಾದೇವಿ ||**
**ಸೋಂಕಿದರೆ ರಾಶಿ ಕಣ ತುಂಬಿ || ೧೦ ||**

ಎಂದು ಹಾಡುತ್ತ ಹಂತೀ ತಿರುವುತ್ತಿದ್ದಾಗ, ಶರಣಬಸವೇಶ್ವರನ ಧರ್ಮ ಪತ್ನಿ ಮಹಾದೇವಮ್ಮನವರು ಚರಗಾ ತಕ್ಕೊಂಡು ಬಂದು ಕಣದಲ್ಲಿ ತಮ್ಮ ಪಾದಗಳನ್ನು ಹಾಕಲಾಗಿ, ಬಚ್ಚತೆನೆಗಳಿಂದ ಹೊರ ಹೊರಡುವ ಕಾಳುಗಳು, ಮುತ್ತಿನಂತೆ ಮಿರಿ ಮಿರಿ ಮಿಂಚುತ್ತಿದ್ದವು. ಆಗ ಸಗರ ಪ್ಪನು ಆನಂದ ಭರಿತನಾಗಿ,

**ಪದ್ಯ || ಜಂತ ಗುಂಟಲಿ ಎಳೆದ, ನಿಂತ ಕಣಕದ ರಾಶಿ |**
**ಬಂತು ನಿನ್ನಾಡ ಹಾಡುತಲಿ | ಬೆಳತನೆಕ |**
**ಚಿಂತಿಲ್ಲದೆಡೆಯು ಶಿವ ನಡಿಗೆ || ೧೧ ||**

ಹೀಗೆಂದು ಹಂತೀ ಪದವನ್ನು ಹೇಳುತ್ತ ಆನಂದದಿಂದ ನಲಿದಾಡಹತ್ತಿ ದನು. ಅಷ್ಟರಲ್ಲಿ

**ಪದ್ಯ || ರಾಶಿ ಗಾಳಿಯು ಬೀಸಿ ಸೊಪಿ ತುಂಬಿ ಯಿತು ಕಣವು |**
**ಕೂಸು ಕೋಳೂರ ಕಡೆಗಾಳಿ | ಬೀಸಿಂಪು |**
**ಮೋಸಲೀ ರಾಶಿ ಜಂಗಮಕೇ || ೧೨ ||**

ಎಂಬಂತೆ ರಾಶಿಯನ್ನು ತೂರುವಷ್ಟು ಗಾಳಿಯು ಬೀಸಲಾರಂಭವಾಗಿ ದ್ದರಿಂದ, ಶರಣಬಸವೇಶ್ವರನನ್ನು ರಾಶಿಯನ್ನು ತೂರಲಿಕ್ಕೆ ಹಚ್ಚಿ, ಸಗ ರಪ್ಪನು ಸೆಕ್ಕ್ಯ ಹೊಡೆಯುಹತ್ತಿದನು. ಶರಣಬಸವೇಶ್ವರನಂತೂ ಭಗ ವಂತನಲ್ಲಿ ಅಚಲವಾದ ನಂಬಿಕೆಯನ್ನುಇಟ್ಟವನಾಗಿ,ಹೀಗೆ ಹಾಡಿದ್ದಾನೆ.

ಪದ್ಯ॥ ಮೂರು ಕಾಲಿನಮೆಟ್ಟು ಮೂರುಲಿಂಗಗಳೇನೋ ।
ತೂರುವಾ ಜೀವಿಚಿತ್ಕಳೆಯು । ವಚನಗಳು ।
ತೂರಿದಾರಾಶಿ ಶಿವಮುತಕೆ ॥ ೧೩ ॥

ಎಂಬಂತೆ ರಾಶಿತೂರಲಿಕ್ಕೆ ಮೆಟ್ಟುಹತ್ತಿ ಸಗರಪ್ಪನನ್ನು ಕುರಿತು— ತಮ್ಮಾ ಈ ಮೆಟ್ಟಿಗಿರುವ ಮೂರುಕಾಲುಗಳೇ "ತ್ರಿವಿಧ" ಲಿಂಗಗಳು. ತೂರುವ ಜೀವಿಯೇ ಚಿತ್ಕಳೆ, ತೂರಿದ ರಾಶಿಯೇ ವಚನರಾಶಿಯೆಂದು ಹೇಳುತ್ತ "**ಮೆದ**" ವನ್ನು ತೂರಿದನು. ಸೆಳ್ಳುಹೊಡೆಯುತ್ತಿದ್ದ ಸಗರಪ್ಪನು ಪಸನಾದ ರಾಶಿಯ "**ನಿಧಿ**"ಯನ್ನು ಮಾಡುತ್ತ ಶರಣಬಸವೇಶ್ವರನನ್ನು ಅನಂತರೂಪವಾಗಿ ಕೊಂಡಾಡಹತ್ತಿದನು.

ಆಗ ನಮ್ಮ ಮಹಾಪತಿವ್ರತೆಯಾದ ಮಹಾದೇವಮ್ಮನವರು ರಾಶಿಯ ಬುತ್ತಿಯನ್ನು ಮೀಸಲಾಗಿ ತಂದಿದ್ದ ಚರಗವನ್ನು ಕಣದಲ್ಲಿ ಶಿವಶರಣರಿಗೆ ಎಡೆಮಾಡಿ ಭೂ—ತಾಯಿಯ ಪೂಜೆಮಾಡಿ ಕಡೆಯ ಚರಗವನ್ನೊಗೆದು, ಕಣಕ್ಕೆ ಬಂದ ಅತಿಥಿಗಳೊಡನೆ ಆನಂದದಿಂದುಂಡು, ರಾತ್ರಿಯನ್ನು ಇರುಳೆಲ್ಲ ಜಾಗರಣೆಮಾಡಿ ಕಾಯ್ದು ಬೆಳ್ಳೀಚಿಕ್ಕೆ ಮೂಡಿದಾಗ ಶಕುನವನ್ನು ನೋಡಲಾರಂಭಮಾಡಿದರು. ಅಷ್ಟರಲ್ಲಿ,

ಪದ್ಯ॥ ಕನ್ನಬೇಟೆಯನಾಡಿ ಹೊನ್ನಬೆಟ್ಟವ ತಿರುಗಿ ।
ಪನ್ನಂಗಧರಗೆ ಎಡೆಮಾಡಿ । ನರಿಕೂಗೆ ।
ಸಂಣ ರಾಸ್ಕುಕ್ಕಿ ಕಣತುಂಬಿ ॥೧೪॥

ಎಂಬಂತೆ ನರಿಯು ಕೂಗಲಾಗಿ ಸಗರಪ್ಪನು ರಾಶಿಯನ್ನು ತುಂಬತೊಡಗಿದನು. ಇತ್ತ ಶರಣಬಸವೇಶ್ವರನು ಪೇಟೆಯರಾಶಿ (ಬೂದನರಾಶಿ) ಯೆಂದು ತೆಗೆದಿಟ್ಟರಾಶಿಯನ್ನು, ಗುರುಮಠಕ್ಕೂ, ಕಣಕ್ಕೆ ಬಂದ ಜಂಗಮರಿಗೂ, ಹೂಗಾರ, ಕಮ್ಮಾರ, ಕುಮ್ಮಾರ, ಬಡಿಗ, ಮಾದಿಗ, ಮೊದಲಾದ ಆಯಗಾರರಿಗೆ ಅವರವರು ಹೊರುವಷ್ಟು ಕಾಳನ್ನು ಕೊಟ್ಟು, ಕುರುಡ, ಕುಂಟ, ಅಂಗಹೀನ ದೀನ—ದರಿದ್ರ ಮೊದಲಾದವರಿಗೂ

ಬೆಳಗಿನಿಂದ ಸಂಜೆಯವರೆಗೂ ದಾನಕೊಟ್ಟು, ದಾಸೋಹಕ್ಕೂ ಕಾಳನ್ನು ಹೇರಿ ಕಳುಹಿಸಿದನು. ಶರಣಬಸವೇಶ್ವರನ, ಅಂದಿನ ದಾನಕ್ಕೆ ಬೆದರಿ ಬೆಚ್ಚಾದಕುಬೇರನು, ತನ್ನ ನವನಿಧಿಗಳನ್ನು ಎಚ್ಚರಿಕೆಯಿಂದ ಕಾಯ್ದು ಜಾಗ್ರತನಾಗಿದ್ದರೆ ಇದರಲ್ಲಿ ಆಶ್ಚರ್ಯವೇನು....?

ರಾಶಿಯನ್ನು ತುಂಬುತ್ತಿದ್ದ ಸಗರಪ್ಪನು ಭಯ-ಭಕ್ತಿಯಿಂದ ಶರಣಬಸವೇಶ್ವರನ ಮುಖವನ್ನು ಮನದಂದು ನೋಡಿ ತಂದೆ, ನಿನ್ನ ಆಗಾಧವಾದ ಈ ಲೀಲೆಯು ಅಪಾರವಾದದ್ದು ಯಾರಿಗೂ ನಿಲುಕದಪ್ಪಾ ಎಂದು ನಮಸ್ಕರಿಸಿದನು ಕೂಡಲೇ ಶರಣಬಸವೇಶ್ವರನು—

**ಪದ್ಯ|| ಶರಣು ಶರಣೆಂಬುವೆನು ಹರಣಹಾರುವತನಕ ।**
**ಕರುಣಿಸರಿ ಶರಣ ಬೊಮ್ಮಯ್ಯ ನಮಗಿನ್ನು ।**
**ಹರಸರಿ ಹುಲುಸು ಹುಲ್ಲುಲ್ಲಿಗೋ || ೧೫ ||**

ಎಂದು ಕೊನೆಯ ಪದವನ್ನು ಹಾಡಿ ಸಗರಪ್ಪನನ್ನು ಕರೆದು ಮಾನ್ಯಸಹೋದರನಾದ ಸಗರಪ್ಪಾ, ನನ್ನ ಸಹೋದರರಾದ, ಮೂವ್ವರು ನಿಷ್ಕಾರಣವಾಗಿ ನನ್ನನ್ನು ಹೊರಗೆ ಹಾಕಿ ಈ ವರ್ಷ ಬೆಳೆಯಿಲ್ಲದೆ ನಿರ್ಗತಿಕರಾಗಿರುವರು ಪ್ರಯುಕ್ತ ನನ್ನ ಮೂರು ಜನ ಸಹೋದರರಿಗೆ, ಎರಡೆರಡು ಬಂಡಿ ಕಾಳನ್ನು ಹೇರಿಕೊಟ್ಟು ನನ್ನ ಆಶೆಯನ್ನು ಪೂರ್ಣಗೊಳಿಸಪ್ಪಾ ಎಂದು ಹೇಳಲಾಗಿ, ಸಗರಪ್ಪನು ಹಾಗೇ ಆಗಲೆಂದು ಹೇಳಿ, ಅವರವರಿಗೆ ಕಾಳನ್ನು ಹೇರಿಕೊಟ್ಟು ಕಣದೊಳಗಿನ ಉಳಿದ ರಾಶಿಯನ್ನು ತನ್ನ ಮನೆಗೂ ಶರಣಬಸವೇಶ್ವರನ ಮನೆಗೂ ಹೇರಿ ಮುಕ್ತನಾದನು. ಇಂಥ ಅದ್ಭುತಕಾರ್ಯಗಳನ್ನು ನೋಡಿದ ಅರಳಗುಂಡಿಗೆಯ ನಾಗರಿಕರೆಲ್ಲರೂ ಶರಣಬಸವೇಶ್ವರನನ್ನು ಅನಂತರೀತಿಯಾಗಿ ಸ್ತುತಿಸುತ್ತ ಹಾಡಿ ಹರಸುವದಲ್ಲದೇ ಭಯಭೀತರಾದರು.

ನಮ್ಮ ಚರಿತ್ರನಾಯಕನಾದ ಶರಣಬಸವೇಶ್ವರನು ಆ ಕಾಲಕ್ಕೆ ಕಟ್ಟಿಸಿದ ರಂಜಣಿಗೆಗಳ ಗುರ್ತು ಅರಳಗುಂಡಿಗೆಯಲ್ಲಿರುವ ಅವನ ಹೊಲದಲ್ಲಿ ಈಗಲೂ ಸ್ವಲ್ಪಭಾಗ ನೋಡಲಿಕ್ಕೆ ಉಳಿದಿವೆ. ನೋಡಿ ಕೊಳ್ಳಬಹುದು.

ಒಂದಾನೊಂದು ದಿನ, **ಬಿದನೂರಿನ "ಮಲ್ಲಿಕಾರ್ಜುನಪ್ಪ" ಗೌಡನೆಂಬ** ತರುಣನು. ತಮ್ಮೂರಲ್ಲಿ ಜನನವಾಗಿದ್ದ. **"ಮಡಿವಾಳಪ್ಪ"** ನೆಂಬುವನನ್ನು ಕರೆದುಕೊಂಡು ಬಂದು, ಶರಣಬಸವೇಶ್ವರನಿಗೆ ನಮಸ್ಕರಿಸಿ, ಮಹಾತ್ಮಾ.... ? ತಿಪ್ಪೆಯಲ್ಲಿ ಹುಟ್ಟಿದ ಪತ್ರೀಗಿಡವು ಪೂಜೆಗೆ ಯೋಗ್ಯವೋ ಅಯೋಗ್ಯವೋ ಎಂದು ಭಿನ್ನವಿಸಲಾಗಿ, ಶರಣಬಸವೇಶ್ವರನು ತಮ್ಮಾ ! ಅಶುಚಿ ಸ್ಥಲದಲ್ಲಿ ಹುಟ್ಟಿದ್ದರೂ ಕೂಡಾ ಅದನ್ನು ಶುಚಿಮಾಡಿ ಲಿಂಗಕ್ಕೆ ಅರ್ಪಿಸಲು ಯಾವ ಸಂಕೋಚವೂ ಇಲ್ಲವೆಂದು ಮಲ್ಲಿಕಾರ್ಜುನಪ್ಪಗೌಡನಿಗೆ ಹೇಳಲಾಗಿ, ತಾನು ಕರೆದುಕೊಂಡು ಬಂದಿದ್ದ ಮಡಿವಾಳಪ್ಪನವರ ಕಡೆಗೆ ಬೆರಳುಮಾಡಿ ತೋರಿಸಿ, ಇವರು ಅದೇ ಪ್ರಕಾರ ಜನಿಸಿರುವರೆಂದು ಯಾವತ್ತೂ ಆವರ ವೃತ್ತಾಂತವನ್ನು ತಿಳಿಸಿದನು. ಆಗ, ಈ ನಮ್ಮ ಚರಿತ್ರನಾಯಕನಾದ ಶರಣಬಸವೇಶ್ವರನು ಅವರೀರ್ವರನ್ನು ಕುರಿತು ತಮ್ಮಗಳಿರಾ.... ? ಬೇಡರ **"ಕಣ್ಣಪ್ಪ"** ನು ಭಕ್ತಿಯಿಂದಲೇ ಗಣಪದಪಿಯಲ್ಲಿಲ್ಲವೇ........? ಬೇಸ್ತರ ಹೆಂಗಸಿನಿಂದ ಜನಿಸಿದ **"ವ್ಯಾಸ" ನು** ಬ್ರಾಹ್ಮಣ ಸಮೂಹಕ್ಕೆ ಗುರುವಾದ ಯೋಗ್ಯತೆಯು ಶಿವಭಕ್ತಿಯದಲ್ಲವೇ? ಊರ್ವಶಿಯ ಮಗನಾದ **ವಶಿಷ್ಠನು** ಸೂರ್ಯವಂಶದ ರಾಜರಿಗೆ ಗುರುವಾಗಲಿಲ್ಲವೇ ? ಚಾಂಡಾಲರಲ್ಲಿ ಹುಟ್ಟಿದ **ಸೂತನು** ಶಿವಭಕ್ತಿಯಿಂದಲೇ ಮುನಿಗಳಸಮೂಹಕ್ಕೆ ಆಚಾರ್ಯನಾಗಿಲ್ಲವೇ ? ಬಹಳ ಹೇಳುವದೇನು ಶಿವನು ಭಕ್ತರ ಆಳು; ಶಿವಭಕ್ತಿಯುಳ್ಳ ವೀರನಿಗೆ ಶಿವದೀಕ್ಷೆಯನ್ನು ಕೊಟ್ಟು, ಶುದ್ಧೀಕರಿಸಬೇಕು. ಇದಕ್ಕಾಗಿ ತಾವು ಯೋಚನೆಯನ್ನು ಮಾಡಬಾರದೆಂದು ಹೇಳಲಾಗಿ, ಬಿದನೂರಿನ ಮಲ್ಲಿಕಾರ್ಜುನಗೌಡನು ತಾನು ಕರೆದುಕೊಂಡುಬಂದಿದ್ದ ಮಡಿವಾಳಪ್ಪನನ್ನು ಶರಣಬಸವೇಶ್ವರನಲ್ಲಿಯೇ ಬಿಟ್ಟು ಶಿವದೀಕ್ಷೆಕೊಡಿಸಿ ಪುನೀತನನ್ನಾಗಿ ಮಾಡಬೇಕೆಂದು ಅಂಗಲಾಚಿ ಬೇಡಿಕೊಂಡು ಪುನಃ ಪುನಃ ನಮಸ್ಕರಿಸಿ ತಮ್ಮೂರಿಗೆ

ಹೊರಟುಹೋದನು. ಇತ್ತ ಶರಣಬಸವೇಶ್ವರನು ಮಡಿವಾಳಪ್ಪನಿಗೆ, ಶ್ರೀಮರುಳಸಿದ್ಧಗುರುಮಹಾರಾಜನಿಂದ ದೀಕ್ಷೆಕೊಡಿಸಿದನು. ಶಿವದೀಕ್ಷೆ ಹೊಂದಿದ, ಮಡಿವಾಳಪ್ಪನು, ನಿತ್ಯ ಜಂಗಮರಿಗೆ ತೃಪ್ತಿಪಡಿಸಿ, ಮಿಕ್ಕಾದ ಪ್ರಸಾದವನು ಸಲಿಸಿ ಸಂತೋಷ ಪಡುತ್ತಿದ್ದನು. ಮುಂದೆ ಕೆಲವೇ ದಿನಗಳ ತರುವಾಯ ಮಡಿವಾಳಪ್ಪನು ಜಂಗಮರಿಗೆ ಬಿಸ್ಥೆ ಮಾಡಲಿಕ್ಕೆಂದು ಹೋಗಲಾಗಿ ಊರೊಳಿಗಿನ ಯಾವಮಠದವರೂ ಅವನ ಬಿಸ್ಥೆವನ್ನು ಸ್ವೀಕರಿಸಲಿಲ್ಲ. ಅಂದು ಶರಣಬಸವೇಶ್ವರನಿಗೂ ಮತ್ತು ಮಡಿವಾಳಪ್ಪನಿಗೂ, ದೈವದವರು ಬಹಿಷ್ಕಾರವನ್ನು ಹಾಕಿದ್ದರು. ಆಗ ಇವನು ಶಿವಲಿಂಗಪೂಜಾನಂದವಾರ್ಧಿಯಲ್ಲಿಯೇ ಮುಳುಗಿದನು. ಆ ಪೂಜೆ ಮೂರುತಿಂಗಳವರೆಗೂ ಸಾಗಿತು. ಅನ್ನ-ನೀರುಗಳಿಲ್ಲದಿದ್ದರೂ ಅವನು ಕುಂದದೆ ಬಳಲದೆ ಯತಾಸ್ಥಿತವಾಗಿದ್ದನು. ಆಗ ಆ ಊರ ದೈವದವರು ತಾವು ಮಾಡಿದ ದ್ರೋಹಕ್ಕಾಗಿ ಪಶ್ಚಾತ್ತಾಪ ಪಟ್ಟು ಜಂಗಮನ ದರ್ಶನವಿಲ್ಲದೆ ಬಳಲುವ ದುಃಖಕ್ಕೆ ಗುರಿಯಾದೆವೆಂದು ಮರುಗಿ ಅನನ್ಯಭಕ್ತಿಭಾವನೆಗಳಿಂದ ಶರಣಬಸವೇಶ್ವರನನ್ನು ಸ್ತುತಿಸುತ್ತ, ಅವರ ಮೇಲಿದ್ದ ಬಹಿಷ್ಕಾರವನ್ನು ಹಿಂದೆಗೆದುಕೊಂಡರು.

ಕಲಂಕಿಯೂ ಕ್ಷಯರೋಗಿಯೂ ಮಿತ್ರೋದಯದಲ್ಲಿ ಕಳೆ ಗುಂದುವವನೂ ಆದ, ಚಂದ್ರನ ಭಕ್ತಿಗೆ ಮೆಚ್ಚಿ, ಅವನ ದೋಷವನ್ನು ಪರಿಹರಿಸಿ, ಶಿವನು ಮುಂದೆಲೆಯಲ್ಲಿ ಧರಿಸಿದಂತೆ, "**ಶರಣಬಸವೇಶ್ವ**"ರಾ ನಿನ್ನ ಚರಣಸೇವಕನಾದ ಶಿವಶರಣ ಮಡಿವಾಳಪ್ಪನ ವಿಷಯವಾಗಿದ್ದ ವಿಷಮ ಗುಣದೋಷಗಳನ್ನು ಪರಿಹರಿಸಿ ರಕ್ಷಸಿದಿ! ತ್ರಾಹಿ ತ್ರಾಹಿ!! ಎಂದು, ಪುರಜನಗಳೂ, ಮಠಮಾನ್ಯದ ಗುರು-ಹಿರಿಯರೂ ಶರಣ ಬಸವೇಶ್ವರನನ್ನು ಕೊಂಡಾಡುತ್ತ ತಮ್ಮ ತಮ್ಮ ಮನೆಗಳಿಗೆ ಹೋದರು.

ಇಂಥ ಗಡುಚಾದ ಸನ್ನಿವೇಶದಲ್ಲಿ ನಮ್ಮ ಚರಿತ್ರನಾಯಕನಾದ ಶರಣಬಸವೇಶ್ವರನು, ದಾಸೋಹದ ಖರ್ಚಿಗಾಗಿ, **ನೋರಟಿಗ**

**ಗಿರಿಲಿಂಗಪ್ಪನೆಂಬ** ಸಾಹುಕಾರನಲ್ಲಿ ಒಂದು ಸಾವಿರ ರೂಪಾಯಿಗಳನ್ನು ಸಾಲವಾಗಿ ತಂದನು. ಸಾಹುಕಾರನಿಗೆ ಋಣಪತ್ರ ಬರೆದು ಕೊಡುವಾಗ ಸಾಹುಕಾರರೇ ನನಗೆ ಶಿವನೆಂದುಕೊಡುವನೋ ಅಂದೇ ನಿಮ್ಮ ಹಣವನ್ನು ಬಡ್ಡೀಸಹಿತವಾಗಿ ತಂದುಕೊಡುತ್ತೇನೆಂದು ಹೇಳಿದನು. ಕೆಲದಿನಗಳ ಮೇಲೆ ಸಾಹುಕಾರನು ತನ್ನ ಖಾತೆ–ಕೀರ್ದಿಯನ್ನು ನೋಡಿ ಶರಣಬಸಪ್ಪನು ಋಣವಾಗಿ ವೈದ ಹಣವನ್ನು ಈ ವರೆಗೂ ತಂದು ಕೊಟ್ಟಿಲ್ಲವೆಂದು ಸಿಟ್ಟಿಗೆದ್ದು ತನ್ನಲ್ಲಿ ದುಡಿಯುತ್ತಿದ್ದ "**ರಾಮುಜಿ**" ಯೆಂಬ ಶಿಪಾಯಿಯನ್ನು ಶರಣಬಸವೇಶ್ವರನ ಕಡೆಗೆ ವಸೂಲಿಗಾಗಿ ಕಳುಹಿಸಿಕೊಟ್ಟನು. ರಾಮುಜಿಯು ಹೊರಹೊರಟಾಗ ಋಣಬಿಟ್ಟುಬಂದರೆ ನಿನ್ನ ಗತಿಯೇ ನೆಟ್ಟಗಾಗಲಿಕ್ಕಿಲ್ಲವೆಂದು ಸಾಹುಕಾರನು ಕಟ್ಟಪ್ಪಣೆ ಯನ್ನುಮಾಡಿದನು. ಒಡೆಯನ ಅಪ್ಪಣೆಯಂತೆ ರಾಮುಜಿಯು ಶರಣ ಬಸವೇಶ್ವರನ ಮನೆಗೆ ಬಂದು ಸಾಹುಕಾರನು ಬರೆದುಕೊಟ್ಟ ಪತ್ರ ವನ್ನು ಕೊಟ್ಟು, ನಿಮ್ಮಾಣೆ ನಿಮ್ಮ ಕುಲದೇವರಾಣೆ, ನೀವು ಬಡ್ಡೀ ಗಂಟು ಚುಕ್ತಾ ಕೊಡದವಿನಹ ನಾನು ಊಟಮಾಡುವದಿಲ್ಲವೆಂದು ಕುಳಿತುಬಿಟ್ಟನು. ಶರಣಬಸವೇಶ್ವರನಾದರೂ ಕೈಯಲ್ಲಿ ಕಾಸಿಲ್ಲದೆ, ಆಲೋಚನೆಯಲ್ಲಿಬಿದ್ದು ಯಾವದೂ ತೋಚದೆ ಕುಳಿತುಕೊಂಡನು. ಅತ್ತ ಮನೆಯಲ್ಲಿ **ಮಹಾದೇವಮ್ಮ** ಹಾಗೂ **ಚನ್ನಬಸವಮ್ಮ**" ನವರು ಶರಣರು ಸ್ನಾನಕ್ಕೆ ಬಾರದ್ದರಿಂದ ಶರಣರಿದ್ದಲ್ಲಿಗೆ ಹೋಗಿ, ಎಲ್ಲ ವನ್ನೂ ತಿಳಿದುಕೊಂಡು, ಶಿವನಹೆಸರಿನಿಂದ ತಂದದ್ದು ಶಿವನಿಗೇನು ಅರಿವಿಲ್ಲವೇ? ಎಂದು ಅಕ್ಕ–ತಂಗಿಯರು ಪೂಜೆ ನಿತ್ಯ ನೇಮಾದಿ ಗಳನ್ನು ಬದಿಗಿರಿಸಿ, ಶಿವಧ್ಯಾನ ಪರವಶರಾದರು. ಅದೇ ರಾತ್ರಿ **ಮೋರಟಗಿ ಗಿರಿಲಿಂಗಪ್ಪನವರ** ಮನೆಗೆ, ಶಿವನೇ ಜಂಗಮನ ರೂಪ ದಿಂದ ಹೋಗಿ ಅವರ ಬಡ್ಡೀಗಂಟುಸಹ ಚುಕ್ತಾಕೊಟ್ಟು, ಕೀರ್ದಿಯಲ್ಲಿ ಜಮಾಬರಿಸಿ, ಋಣಪತ್ರದ ತಲೆಹರಿಸಿ, ಹೊರಟು ಹೋದನು. ಈ ಮಾತು

ವಿಚಿತ್ರವೆಂದು ಪ್ರತಿಪಾದಿಸುವ ಸಂದೇಹವುಳ್ಳವರು. ಮೋರಟಗಿ ಗಿರಿಲಿಂಗಪ್ಪನವರ, ಮನೆಯಲ್ಲಿ ಆ ವರುಷದ ಖಾತೆ–ಕೀರ್ದಿಗಳು ಈಗಲೂ ಪೂಜೆಗೊಳ್ಳುತ್ತಲಿವೆ ಪರೀಕ್ಷೆಮಾಡಬಹುದು. ಮರುದಿನವೇ ಸಾವುಕಾರನು ಶರಣಬಸವೇಶ್ವರನಿಗೆ ಪತ್ರಬರೆದು, ನೀವು ಕೊಡತಕ್ಕ ಹಣವನ್ನು ನಿನ್ನೆ ರಾತ್ರಿ, ನಿಮ್ಮ ಕಡೆಯಿಂದ ಬಂದ ಶಿವಯ್ಯನೆಂಬವನು, ತಂದುಕೊಟ್ಟು ನಮ್ಮ ಖಾತೆಗೆ ಜಮಾಬರೆಯಿಸಿ, ಋಣಪತ್ರವನ್ನು ತಲೆ ಹರಿಸಿ ಹೈದಿದ್ದಾನೆ. ಕಾರಣ ನಮ್ಮ ಆಳಾದ ರಾಮಜಿಯನ್ನು ತಿರುಗಿ ಕಳುಹಿಸಬೇಕೆಂದು ಮತ್ತೊಂದು ಆಳನ್ನು ಕಳುಹಿಸಿದ್ದನು. ಮೋರಟಗಿ ಗಿರಿಲಿಂಗಪ್ಪನ ಕಡೆಯಿಂದ ಹೋದ ಆಳು ಶರಣಪ್ಪನಿಗೆ ತಾನು ತಂದಿದ್ದ ಪತ್ರವನ್ನುಕೊಟ್ಟು ನಮಸ್ಕರಿಸಿ ಹೊರಟುಹೋದನು. ಆ ಪತ್ರದ ವಿಷಯ ವನ್ನು ಓದಿನೋಡಿ ರಾಮಜಿಯು ಸಾವುಕಾರನ ನೌಕರಿಗೆ ತಿಲಾಂಜಲಿ ಯನ್ನು ಕೊಟ್ಟು ಶರಣರಲ್ಲಿ ಸೇವೆಮಾಡುತ್ತ ನಿಂತುಕೊಂಡನು.

ಪ್ರಥಮ ಪತ್ನಿಯರಾದ ಮಹಾದೇವಮ್ಮನವರು ಗರ್ಭವತಿಯ ರಾಗಿದ್ದರು. ನವಮಾಸಗಳೂ ತುಂಬಿ ದಿವದಲ್ಲಿ ಬಿದ್ದಿತ್ತು. ಆ ಸಮ ಯದಲ್ಲಿ ಓರ್ವ ಜಂಗಮನು "ಗುರುಕೋರ್ತ್ಯಾಣದಲ್ಲಿ ಭಿಕ್ಷಾ" ಎಂದು ಬಾಗಿಲ ಮುಂದೆ ಬಂದು ನಿಂತನು. ನಮ್ಮ "**ಮಹಾದೇವಮ್ಮ**" ನವರು ಗರ್ಭದಭಾರದಿಂದ ಭಿಕ್ಷೆಬೇಡಬಂದ ಜಂಗಮನಿಗೆ ತಡಮಾಡಿ ನೀಡಲಾಗಿ ಶರಣಬಸವೇಶ್ವರ ಮಹಾನುಭಾವನು ಸಿಟ್ಟಿಗೆದ್ದು, ತನ್ನ ಧರ್ಮಪತ್ನಿಯಾದ ಮಹಾದೇವಿಯನ್ನು ಕುರಿತು....? ಮಹಾದೇವಿ! ನೀನು ಗರ್ಭದಭಾರದಿಂದ ಆಲಸ್ಯಳಾಗಿ ಜಂಗಮನ ಸೇವೆಗೆ ತಡಮಾಡಿದೆ ಯಷ್ಟೇ....? ಗರ್ಭದಲ್ಲಿರುವ ಪಿಂಡವು ನಿನಗೆ ತೊಂದರೆಯನ್ನು ಕೊಟ್ಟಿದ್ದರಿಂದ ಶಿವನಾಜ್ಞೆಯಾಗಿ ಗರ್ಭವು, ಹಾಗೆಯೇ ಗರ್ಭದಲ್ಲಿರ ಲೆಂದು ಶಾಪಕೊಟ್ಟರು. ಅದಕ್ಕೆ "ಮಹಾದೇವಮ್ಮನು" ಗಡಗಡನೆ ನಡುಗಿದವಳಾಗಿ, ತಪ್ಪು ಒಪ್ಪಿದವಳಾಗಿ, ಅಂದು ದಾಸೋಹಕಾರ್ಯದಲ್ಲಿ

ಆಲಸ್ಯಳಾಗಿದ್ದಕ್ಕಾಗಿ, ಪಶ್ಚಾತ್ತಾಪಪಟ್ಟವಳಾಗಿ, ತಾನು ಆಚರಣೆಗೆ ಕಂಟಕವಾಗಿ ಬರುತ್ತಿರುವ ನೈತಿಕಗುಣ ವೈರಿರೂಪವನ್ನು ದೂರಿಡುವದಕ್ಕಾಗಿ ಶಂಕರಾ, ಕೃಪಾಕರಾ, ತ್ರಿಪುರಾರಿ ಭಕ್ತಪ್ರಿಯಾ, ನಿನ್ನ ಅಣತಿಯನ್ನು ನೆರವೇರಿಸಲು ಶಕ್ತಿಯನ್ನೂ, ನಿನ್ನಲ್ಲಿ ಅಚಲವಾದ ಭಕ್ತಿಯನ್ನೂ ತನಗೆ ನೀಡೆಂದು ಭಯ–ಭಕ್ತಿಯಿಂದ ಬೇಡಿ ನಮಸ್ಕರಿಸಿ, ಶರಣಬಸವೇಶ್ವರನ ಪಾದದಲ್ಲಿ ತನ್ನ ಮಸ್ತಕವನ್ನಿರಿಸಿ, ಬೇಡಿಕೊಂಡರೂ ಕೂಡಾ ಶಾಪಕ್ಕೆ ಉಶ್ಯಾಪವಾಗಲಿಲ್ಲ. ಇತ್ತಿತ್ತಲಾಗಿ ಶರಣಬಸವೇಶ್ವರನ ಸಂಗವೆಂದರೆ ಶಿವಶರಣರಿಗೆ ಒಂದು ದೊಡ್ಡ ಹಬ್ಬ ! ಎಲ್ಲ ಕಡೆಗಳಿಂದಲೂ ಶರಣರು ಬರಲಾರಂಭಿಸಿ ಅವನ ದಿವ್ಯ ವಚನಾಮೃತವನ್ನು ಕೇಳಲು ಹಾತೊರೆಯುತ್ತಿದ್ದರು. ಶರಣಬಸವೇಶ್ವರನ ವಚನವೈಭವವೂ ವಾಕ್‌ಪ್ರೌಢಿಮೆಯೂ, ಭೋಧನಾರೀತಿಯೂ, ಪರಮತಸಹಿಷ್ಣುತೆಯೂ ಜಂಗಮಸೇವಾ ತತ್ಪರತೆಯೂ ಸತ್ಯಪ್ರಿಯತೆಯೂ ಮುಖದ ಗಂಭೀರ ಭಾವಭಂಗಿಯೂ ಎಂತಹರನ್ನು ಮುಗ್ಧರನ್ನಾಗಿ ಮಾಡುತ್ತಿದ್ದಿತು.

ಭಕ್ತಪರಾಧೀನನಾದ ಪರಶಿವನು ಆ ದಂಪತಿಗಳ ಭಕ್ತಿಗೊಲಿದು ತನ್ನ ಪರಮ ಚಿತ್ಕಳೆಯನ್ನು ತುಂಬಿ ಜಂಗಮನ ರೂಪವನ್ನು ಕೊಟ್ಟು ಅರಳಗುಂಡಿಯ, ಶಿವಶರಣೆಯಾದ ಮಹಾದೇವಮ್ಮನವರ ಗರ್ಭದಲ್ಲಿರುವ “ ಪಿಂಡಕ್ಕೆ ಉಶ್ಯಾಪವಿತ್ತು ಕರುಣಿಸಿ ಬಾ ” ಎಂದು ನಿರೂಪಿಸಿದ್ದಲ್ಲದೆ ಜಂಗಮಮೂರ್ತಿಯೇ, ನೀನು ಭೂಮಿಗೆ ಹೋಗಿ ಮೆರೆದು, ಕರುಣವನ್ನು ಕರೆದು, ಭೂಮಿಯನ್ನು ಪೊರೆದು, ಪಾಪ–ತಾಪಗಳನ್ನು ತರಿದು, ವಿರತಿಯಲ್ಲಿನೆರೆದು, ಕುಮತಗಳನ್ನು ಜರಿದು, ಜಡಕರ್ಮಸಂಗಿಗಳನ್ನುತೊರೆದು, ಮಾಯಾಪಾಶವನ್ನು ಹರಿದು ಬಾ ಎನ್ನಲಾಗಿ, ಜಂಗಮಮೂರ್ತಿಯು ಆನಂದದಿಂದ ನಮಿಸಿ ಕೊಂಡಾಡಿ, ಕೈಲಾಸದಿಂದಿಳಿದು ಅರಳಗುಂಡಿಗೆಯನ್ನು ಪ್ರವೇಶಿಸಿ ಮಾಹಾದೇವಮ್ಮನಿಗೆ ಶಾಪವಿಮೋಚನೆ ಮಾಡಿ, ವರಪ್ರದಾನವನ್ನು ಕೊಟ್ಟು, ಆವಳಿಂದ ಸೇವೆ ತಕ್ಕೊಂಡು ಪುನಃ ಕೈಲಾಸಕ್ಕೆ ತೆರಳಿದನು.

ಮುಂದೆ ಕೆಲಹೊತ್ತಿನಲ್ಲಿಯೇ ಮಹಾದೇವಮ್ಮನು ಗಂಡು ಕೂಸನ್ನು ಹೆತ್ತಳು. ಗುರುವಿನಿಂದ ಲಿಂಗಮಹಿಮೆಯನ್ನೂ, ಲಿಂಗದಿಂದ ಜಂಗಮಮಹಿಮೆಯನ್ನೂ ಅರಿತು, ಪರಮಪಾವನರಾಗಿದ್ದ ಶರಣ ಬಸವೇಶ್ವರನೂ ಅವನ ಧರ್ಮಪತ್ನಿಯರೂ ಕೂಸಿಗೆ ಲಿಂಗಧಾರಣಾದಿ ನೇಮನಿತ್ಯಾದಿಗಳನ್ನು ರೂಢಿಯಂತೆ ಗರ್ಭದ ಎಂಟನೆಯ ತಿಂಗಳದಲ್ಲಿಯೇ ಮಾಡಿದ್ದರಿಂದ ಹುಟ್ಟಿದ ದಿನವೇ ತೊಟ್ಟಿಲಕಾರ್ಯವನ್ನು ಮುಗಿಸಿ **"ಗುರು-ಲಿಂಗ-ಜಂಗಮ"**ನೆಂದು ಮಗುವಿಗೆ ಹೆಸರಿಟ್ಟರು. ಮುಂದೆ ಕೆಲವೇದಿನಗಳ ತರುವಾಯ, **ಮಹಾದೇವಮ್ಮನು** ತಾನು ಹಡೆದಿರುವ **ಪುತ್ರಸಮೇತಳಾಗಿ,** ಶಿವಪೂಜೆಯಲ್ಲಿ ಮೈಮರೆದು ಯೋಗಾಸನದಲ್ಲಿರುವಾಗ, ಮಹಾಜ್ಯೋತಿಯೊಂದು ಲಿಂಗದಿಂದುದ್ಭವಿಸಿ ಬ್ರಹ್ಮಾಂಡವನ್ನು ಬೆಳಗಿ ತೋಳಗಿ ಮರುಕ್ಷಣದಲ್ಲಿ ಅದೃಶ್ಯವಾಯಿತು. ಕೂಡಲೇ ಶರಣಬಸವೇಶ್ವರನೂ ದ್ವಿತೀಯಭಾರ್ಯಳಾದ ಚನ್ನಬಸವಮ್ಮನೂ ನೋಡುನೋಡುವಷ್ಟರಲ್ಲಿ ಇಷ್ಟಲಿಂಗದಲ್ಲಿ ಮಹಾದೇವಮ್ಮನೂ ಮಗುವಾದ **" ಗುರು-ಲಿಂಗ-ಜಂಗಮ"**ನೂ ಐಕ್ಯರಾಗಿದ್ದರು.

ಆ ಬಳಿಕ ಶರಣಬಸವೇಶ್ವರನು ತನ್ನ ಗುರುಗಳಾದ ಶ್ರೀ ಮರುಳಸಿದ್ಧದೇವರನ್ನು ಮುಂದಿಟ್ಟುಕೊಂಡು, ಮಹಾದೇವಮ್ಮನವರ ಮತ್ತು ಗುರು—ಲಿಂಗ—ಜಂಗಮನ ಕಳೇಬರಗಳನ್ನು ಕೂಡಲೇ ವಿಧಿವತ್ತಾಗಿ ಮಣ್ಣಿಗೆ ಮರೆಮಾಡಿ ಮುಂದಿನಕಾರ್ಯನಿಮಿತ್ಯವಾಗಿ ಪರದುಃಖಕಾತರ ಹೃದಯವು ಅದಾವದೋ ಅಶಾಂತತೆಯ ಅಂದೋಳನದಲ್ಲಿ ಸಿಕ್ಕಿನಲುಗಿ ಹೋಗಿದ್ದರೂ ಅವನ ಪ್ರಜ್ಯೋಜ್ವಲ ವದನವು ಪೌರ್ಣಿಮಾ ಚಂದ್ರನಂತೆ ಪ್ರಕಾಶಮಾನವಾಗಿದ್ದಿತು. ಧರ್ಮನಿಂದಕರ ಸಹವಾಸಮಾಡಲಾಗದೆಂಬ ಧರ್ಮಶಾಸ್ತ್ರದ ಪ್ರಕಾರ ಶರಣಬಸವೇಶ್ವರನು ಕಲ್ಯಾಣಕ್ಕೆ ಹೋಗಬೇಕೆಂದು ನಿರ್ಧರಿಸಿದನು.

ತನಗೆ ವಿದ್ಯೆಯೇಸತಿಯು, ಹರುಷವೇಸುತನು, ವೈರಾಗ್ಯವೇ ಬಂಧುವು, ಸ್ಥೈರಣೆಯೇಪರಿಚಾರಕನು, ಶಾಂತಿಯೇಸುಖವು, ಅರಿವೇ ದೇಹವು, ಆಚಾರವೇಪಿತನು, ಭಕ್ತಿಯೇಮಾತೆಯು, ಸತ್ಯವೇಮಗಳು, ಶ್ರದ್ಧೆಯೇ ಸೊಸೆಯು, ಮೈತ್ರ್ಯಾದಿ ಚಿತ್ತಪರಿಕರ್ಮಗಳೇ ಬಂಧುಗಳು, ಧರ್ಮವೇ ವಾಹನವು, ದಮವೇ ಆಚಾರ್ಯನು, ಅಹಿಂಸೆಯೇ ದಾಸಿ, ಆಸ್ತೇಯವೇ ದಾಸನು, ವಿಚಾರವೇ ಕ್ಷೇತ್ರವು, ಮುಕ್ತಿಯೇ ದೇಶವು, ಇಂಥಹ ಪಾರಮಾರ್ಥ ಕುಟುಂಬವನ್ನು ಕಟ್ಟಿಕೊಂಡು ಅಸತ್ಯವಾದ ಹೆಂಡರು–ಮಕ್ಕಳು ಅಂಣ–ತಮ್ಮಂದಿರೆಂಬ ಮುಂತಾದ ಕುಟುಂಬವನ್ನು ಬಿಟ್ಟು ತನ್ನ ಸದ್ಭಕ್ತನಾದ ರಾಮಜಿಯನ್ನು ಕರೆದುಕೊಂಡು, ದೇಶಸಂಚಾರಕ್ಕಾಗಿ ಹೊರ ಹೊರಡುವ ವಿಚಾರದಲ್ಲಿ ಮಗ್ನನಾದನು.

ಆಬಳಿಕ ಶರಣಬಸವೇಶ್ವರನು ಅಮರಗುಂಡಕೊಳ್ಳದ ಅಮರೇಶ್ವರನಿಂದ ಪಡೆದುಕೊಂಡಿದ್ದ ಭಸ್ಮೋದ್ಧೂಳನ–ಭಸ್ಮವನ್ನು ತ್ರಿಪುಂಡ್ರ ಧಾರಣದಿಂದ, ವಿಷಯಗಳನ್ನಳಿದು ಸಂಸಾರವೆಂಬ ಘೋರಾರಣ್ಯದಲ್ಲಿ ಬಳಲದೆ, ಲೋಭವೆಂಬ ಕೆಸರನ್ನು ತುಳಿಯದೆ, ಇಂದ್ರಿಯಗಳೆಂಬ ಶತ್ರುಗಳನ್ನು ಗಣಿಸದೆ ದುರ್ಮೋಹವೆಂಬ ಭೂತಕ್ಕೆ ಅಳುಕದೆ, ಕಾಮನೆಂಬ ಕಳ್ಳನಕೈಗೆ ಸಿಕ್ಕದೆ ಮದವೆಂಬ ಕತ್ತಲೆಯಿಂದ ಕಂಗೆಡದೆ ಕೋಪವೆಂಬ ಹುಲಿಗೆ ಹೆದರದೆ, ವಿಷಯವೆಂಬ ಕಂಟಕದಲ್ಲಿ ಕಾಲೂರದೆ ಮಮತೆಯೆಂಬ ಹಾವಿಗೆ ಅಂಜದೆ ತಾಪವೆಂಬ ಕುಳಿಯಲ್ಲಿ ಬೀಳದೆ, ದುರಭಿಮಾನವೆಂಬ ಮಡುವಿನಲ್ಲಿ ಮುಳುಗದೆ ಅಸೂಯೆಯೆಂಬ ವಿಷವಲ್ಲಿಯ ತೊಡಕಿಗೆ ಸಿಕ್ಕದೆ ಸರ್ವಾವಧಾನದಲ್ಲಿರುತ್ತಾ ಜಂಗಮಸ್ಥಲವನ್ನು ಅಂಗಗೊಂಡು ತನ್ನ ಯಾವತ್ತೂ ಆಸ್ತಿ–ಪಾಸ್ತಿಗಳನ್ನು ಕಿರಿಯ ಹೆಂಡತಿಯಾದ ಚನ್ನಬಸವಮ್ಮನಿಗೆ ಒಪ್ಪಿಸಿ; ನಂದಾದೀಪವನ್ನು ನಂದಿಸದೆ, ಕೈಲಾದಮಟ್ಟಿಗೆ ದಾಸೋಹವನ್ನು ಸಾಗಿಸುತ್ತ ನಿತ್ಯ ನೇಮ ಪೂಜಾದಿಗಳನ್ನು ತಪ್ಪದೇ ನಡಿಸಿಕೊಂಡು, ಶಾಂತಿಯಿಂದಿರಬೇಕೆಂದು

ಕಟ್ಟಪ್ಪಣೆಯನ್ನಿತ್ತು ತಾನು ರಾಮುಜಿಯನ್ನು ಕರೆದುಕೊಂಡು, ಭೂ ಕೈಲಾಸದಂತಿರುವ ಕಲ್ಯಾಣಪಟ್ಟಣವನ್ನು ಸೇರಿ, ಕಾಲಹರಣಮಾಡಿ ಕೊಂಡಿರಬೇಕೆಂದು **" ಅರಳಗುಂಡಿಗೆ "** ಯನ್ನು ಬಿಟ್ಟು ಕಲ್ಯಾಣದ ಕಡೆಗೆ ಹೊರಟು ಹೋದನು. ಇತ್ತ ಚನ್ನಬಸವಮ್ಮನು, ಶರಣಬಸವೇ ಶ್ವರನ ಅಪ್ಪಣೆಯಂತೆ ನಿತ್ಯನೇಮಾದಿಗಳನ್ನು ನಡಿಸುತ್ತ ದಾಸೋಹವನ್ನು ಸಾಗಿಸುತ್ತಿರಲು ಒಂದುದಿನ ಕನಸಿನಲ್ಲಿ ಪರಮಾತ್ಮನ ದರ್ಶನವಾಗಿ ಮರ್ತ್ಯಲೋಕದ ನಿನ್ನ ಹಸನಾದ ಬಾಳನ್ನು ಮುಗಿಸಬೇಕೆಂದು ಅಪ್ಪಣೆ ಯಾಯಿತು. ನಿದ್ರೆತಿಳಿದೆದ್ದು ಮಹಾಸಾಧ್ವಿಯಾದ ಚನ್ನಬಸವಮ್ಮನು, ಯೋಗಮುದ್ರಾಸಿದ್ಧಿತಳಾದಳು.

ಆಗ " ಅರಳಗುಂಡಿಗೆ " ಯ ಪುರಜನಗಳೂ, ಆಪ್ತ ಇಷ್ಟರೂ, ಹರ—ಗುರು—ಚರಮೂರ್ತಿಗಳೂ ಕೂಡಿ, ಆಕೆಯ ಕಳೇಬರವನ್ನು ಸಮಾಧಿಯಲ್ಲಿಳಿಸಿದರು. ಕೆಲವು ದಿನಗಳ ತರುವಾಯ, **ಚನ್ನಬಸವಮ್ಮ** ನವರ ಸಮಾಧಿಯಮೇಲೆ ಗುಡಿಯನ್ನು ಕಟ್ಟಿಸಿದ್ದಾರೆ. ಇಂದಿಗೂ ಆ ಗುಡಿಯಲ್ಲಿರುವ ಗದ್ದುಗೆಯ ಪೂಜೆಯು ತಪ್ಪದೇ ನಡೆಯುತ್ತದೆ.

ಇತ್ತ ನಮ್ಮ ಚರಿತ್ರನಾಯಕನು **" ಅರಳಗುಂಡಿಗೆ "** ಯನ್ನು ಬಿಟ್ಟು, **" ರಾಮುಜಿ "** ಯೊಂದಿಗೆ ಹೊರಟಿರಲು, ನ್ಯಾವನೂರ **ಸೌ**ಳ ಹಳ್ಳದ ಗುಂಪಿಗೆ ಹೋಗುವಷ್ಟರಲ್ಲಿ ಕಾಲನೆಂಬ ಒಕ್ಕಲಿಗನು ಆಕಾಶ ವೆಂಬ ಹಾಳು ಹೊಲದಲ್ಲಿ ಅರ್ಕನನ್ನು ತೆಗೆದು ಸಂಜೆಯೆಂಬ ಜೆಂಕೆ ಯನ್ನು ಹಚ್ಚಿ ಮಬ್ಬೆಂಬ ಗೊಬ್ಬರವನ್ನು ಹಾಕಿ ಚಿಕ್ಕೆಗಳೆಂಬ ಬೀಜ ಗಳನ್ನು ಚಲ್ಲಿದ್ದರಿಂದ ಅಲ್ಲಲ್ಲಿ ಚಿಕ್ಕೆಗಳು ರಂಜಿಸುತ್ತಿದ್ದವು. ಅಂದು ಶಿವರಾತ್ರಿ ಹಬ್ಬವಾಗಿದ್ದರಿಂದ, ಹಬ್ಬದ ಶಿವಪೂಜೆಯನ್ನು ಅಲ್ಲಿಯೇ ತೀರಿಸಿಕೊಂಡು, ಮುಂದೆ ಅಲ್ಲಿಂದ ಹೊರಟು, ಹರನಾಳಕ್ಕೆ ಒರಲಾಗಿ ಸಂಜೆಯಾಯಿತು. ಭೀಮಾನದಿಯು ಎರಡೂ ದಡಸೋಸಿ ತುಂಬಿ ಹರಿ ಯುತ್ತಿತ್ತು. ಆಗ, ಶರಣಬಸವೇಶ್ವರನು ಅಣಿಮಾದ್ಯಷ್ಟ ಸಿದ್ಧಿಗಳ ಬಲ

ದಿಂದ, ನೀರಮೇಲೆ ತನ್ನ ಕಂಬಳಿಯನ್ನು ಹಾಸಿ, ಅದರ ಮೇಲೆ "**ತಾನೂ**" ಮತ್ತು "**ರಾಮಜಿ**" ಯೂ ಕುಳಿತುಕೊಂಡು ನದಿಯನ್ನು ದಾಟಿ, ಬೆಳಗುಂಪಿಗೆ ಬಂದಿಳಿದುಕೊಂಡರು.

ಮರುದಿನವೇ ಆ ಗ್ರಾಮದ ಕಬ್ಬಲಿಗ ಜಾತಿಯ ಕಿವಿಶೂಲಿಯವನ ಕರ್ಣಶೂಲಿಯನ್ನು, ಪರಿಹರಿಸಿ ಮುಂದೆಸಾಗಿ "**ಬಸವಪಟ್ಟಣಕ್ಕೆ**" ದಯಮಾಡಿಸಿ ಮೃತವಾದ ಗೋವನ್ನು ಬದುಕಿಸಿ, "**ಕೋಬಾಳ**" ಕ್ಕೆ ಹೋಗಿ ಕೋಬಾಳದ ಜಂಗಮನು ಭೂತಹಿಡಿದು ಅತಿ ಅಹಾರವನ್ನು ಉಣ್ಣುವದನ್ನು ಕೇಳಿ, ಅವನ ಭೂತಚೇಷ್ಟೆಯನ್ನು, ಬಿಡಿಸಿ, ಮಿತ ಅಹಾರವನ್ನುಂಣುವಂತೆ ಮಾಡಿ ಅಲ್ಲಿಂದ ಮುಂದೆಸಾಗಿ "**ಅವರಾಧಿ**" ಗೆ ಹೋಗಿ ಆ ಗ್ರಾಮದ "**ದಂಡರಾಯಗೌಡ**" ನ ಮನೆಯಲ್ಲಿ ನಿಂತುಕೊಂಡನು.

ಮರುದಿನವೇ ಶರಣಬಸವೇಶ್ವರನು ಕಲ್ಯಾಣಕ್ಕೆ ಹೊರಡಲಾಗಿ **ದಂಡರಾಯಗೌಡನು** ಅವರನ್ನು ತಮ್ಮಲ್ಲಿಯೇ ಉಳಿಸಿಕೊಂಡು ದಾಸೋಹ ನಡಿಸಹತ್ತಿದನು. ಮುಂದೆ ಮಳೆಗಾಲದಲ್ಲಿ ದಾಸೋಹಕ್ಕಾಗಿ ತಂದಿಟ್ಟ ಕಟ್ಟಿಗೆಗಳು ತೀರಿಹೋಗಿದ್ದರಿಂದ, ಶ್ರೀಮಂತಗೌಡನು ತನ್ನ ಮನೆಯನ್ನೇ ಬಿಚ್ಚಿಸಿ, ಜಂತೆ, ತೊಲೆ, ಕಂಬಗಳನ್ನು ದಾಸೋಹದ ಅಡಿಗೆಗಾಗಿ ಕೊಟ್ಟು ಶರಣನ ಕೃಪೆಯನ್ನು ಸಂಪಾದಿಸಿದನು. ಅಂದಿನಿಂದ ಇಂದಿನವರೆಗೂ, ಆ ಗೌಡನಮನೆಗೆ ಶರಣಬಸವೇಶ್ವರನ ದಾಸೋಹದ ಮನೆಯೆಂದು ಹೆಸರುಬಿದ್ದು, ಈಗಲೂ ಕರೆಯುತ್ತಾರೆ.

ಈ ವಾರ್ತೆಯು ಮಹಾಕರ್ನಾಟಕಕ್ಕೆ ಮುಕುಟಮಣಿಯಾದ ಕಲಬುರ್ಗಿ, ಕಲ್ಯಾಣ, ಮತ್ತು, ಸೊಲ್ಲಾಪೂರಗಳ ಸುತ್ತಲೂ ಹಬ್ಬಿತು. ಸಕಲ ಭಗವದ್ಭಕ್ತರಿಗೆ ಪ್ರಿಯಕರವೂ ವಿಶೇಷತಃ "**ಹರ-ಗುರು**" ಭಕ್ತರಿಗೆ ಆಗರವೂ ಧರ್ಮಾಚಾರ್ಯರಿಗೆ ಪ್ರಿಯಕರವೂ ಆಗಿ, ಈಗ ತಾನೇ ಸುಪ್ರಸಿದ್ಧವಾದ, **ಕಲಬುರ್ಗಿಯ ಬ್ರಹ್ಮಪುರದ ವೀರ**

**ಶೆಟ್ಟೆಪ್ಪಗೌಡರ ನಾಲ್ಕುಜನ ಮಕ್ಕಳಲ್ಲಿ ಚಿಕ್ಕಮಗನಾದ ದೊಡ್ಡ ಪ್ಪಗೌಡನು** ಶರಣಬಸವೇಶ್ವರನ ದರ್ಶನಕ್ಕಾಗಿ ಹೊರಟು ಅವರಾದಿಗೆ ಬಂದು ತಲುಪಿ ಮಹಾತ್ಮನ ದರ್ಶನವನ್ನು ತಕ್ಕೊಂಡನು. ಅಲ್ಲಿ ನಡೆದ ದಾಸೋಹವನ್ನೂ, ಆತನು ನಡೆದು ನುಡಿದು ತೋರಿಸುವ ಹಾದಿಯನ್ನೂ, ಕಂಣಾರೆಕಂಡು ಬೆರಗಾಗಿ ಶರಣಬಸವೇಶ್ವರನನ್ನು ನಂಬಿ, ಭಯ–ಭಕ್ತಿಗಳಿಂದ ನುಡಿದಂತೆ ನಡೆದರೆ ಈ ಚಿನ್ಮಯಮೂರ್ತಿಗೆ ನನ್ನ ಅಲ್ಪಕಾಣಿಕೆಯನ್ನೊಪ್ಪಿಸಿದಂತಾಗುತ್ತದೆಂದು ತಿಳಿದು, ಭಕ್ತಿಗೆ ಜೀವದಾತೃಸ್ವರೂಪನಾದವನೂ, ಕರ್ನಾಟಕ ಭಾಷಾಮಾತೆಯ ಕಂಠಾಭರಣನೂ, ಪರಶಿವನ ಚಿಚ್ಛಕ್ತಿಯಸ್ವರೂಪನೂ ಶಿವತಾರಕಮಂತ್ರವೆಂಬ ಬೀಜವನ್ನು ಭೂಮಿಯಲ್ಲಿ ಬಿತ್ತುತ್ತಿದ್ದ ಮಹಾನುಭಾವನೂ, ಭಕ್ತಿಯಿಂದಲೇ ಪರಶಿವನು ಒಲಿದು ನಲಿಯುವನೆಂದು ಸಾರಿ ಸಾರಿ ಹೇಳುತ್ತಿರುವ ದೀನರಕ್ಷಕನೂ ಆದ, ಶರಣಬಸವೇಶ್ವರನ ಗುಣಮಹತ್ವವನ್ನು ಹೊಗಳಲು ಸಾವಿರ ನಾಲಿಗೆಯುಳ್ಳ ಆದಿಶೇಷನಿಗೂ ಸಹ ಅಸದಳವಾಗಿರುವಲ್ಲಿ ನನ್ನಂಥ ಪಾಮರನ ಪಾಡೇನೆಂದು ತಿಳಿದು, ದೊಡ್ಡಪ್ಪಗೌಡನು ಮಹಾನುಭಾವಾ ? ನನ್ನ ಮನೋಬಯಕೆಯನ್ನು ತಾವು ಪೂರ್ಣಮಾಡುವದಾದರೆ, ತಾವು ನಮ್ಮಲ್ಲಿಗೆ ಬಂದು ಹೋಗಬೇಕೆಂದು ಅಡಿದಾವರೆಗಳಲ್ಲಿ ಅರಿಕೆ ಮಾಡಿಕೊಂಡನು. ಆಗ ಶರಣಬಸವೇಶ್ವರನು ದೊಡ್ಡಪ್ಪಗೌಡನನ್ನು ಕುರಿತು ತಮ್ಮಾ? ನಾನು ದಾಸೋಹಕ್ಕಾಗಿ ಕೈಗಡ, ತಂದಿದ್ದ ಮೂಗಳ ಜೋಳವನ್ನು ಪುನಃ ಅವರವರಿಗೆ ಕೊಟ್ಟು ಕಲ್ಯಾಣಕ್ಕೆ ಹೋಗುವಕಾಲಕ್ಕೆ ನಿಮ್ಮನ್ನುಕಂಡು ನಿಮ್ಮ ಮನೋಬಯಕೆಯನ್ನು ನೆರವೇರಿಸುವೆನೆಂದು ಅಭಯವಿತ್ತು ಆಶೀರ್ವದಿಸಿ ದೊಡ್ಡಪ್ಪಗೌಡನನ್ನು ಬೀಳ್ಕೊಟ್ಟನು. ಶರಣರಿಂದ ಆಶೀರ್ವಾದ ಪಡೆದು ತಮ್ಮೂರಿಗೆ ಹೊರಟಿರುವ ದೊಡ್ಡಪ್ಪಗೌಡನು ಕಲಬುರ್ಗಿಗೆ ಸುರಕ್ಷಿತವಾಗಿ ಬಂದು ತಲುಪಿದನು. ಪಿತೃಗಳಾದ ವೀರಶೆಟ್ಟೆಪ್ಪಗೌಡರಿಗೂ, ಇನ್ನುಳಿದ

ಮೂರು ಜನ ಅಣ್ಣಂದಿರಿಗೂ ತಾನು ಕಂಡುಬಂದ ಶರಣಬಸವೇಶ್ವರನ ಎಲ್ಲ ಸಂಗತಿಯನ್ನು ಮರೆಮಾಚದೆ ತಿಳಿಸಲಾಗಿ ಅವರ ಮನಸ್ಸಿನ ಮೇಲೆ ತುಂಬಾ ಪರಿಣಾಮವಾಗಿ ಶರಣರು ಕೊಡಬೇಕಾಗಿದ್ದ ಮೂಗಳ ಜೋಳವನ್ನು ಅವರಾದಿಗೆ ಶರಣರಿದ್ದೆಡೆಗೆ ಕಳಿಸಿಕೊಟ್ಟರು.

ಇತ್ತ ಶರಣಬಸವೇಶ್ವರನ ಉದ್ದೇಶವು ಪುಣ್ಯಮಯವಾದ ಸುಪ್ರಸಿದ್ಧವಾದ ಕರ್ನಾಟಕ-ದೇಶದ ಕಲ್ಯಾಣವನ್ನು ನೋಡಬೇಕಾಗಿದ್ದ ಹಂಬಲವೂ ದಿನೇ ದಿನೇ ಬೆಳೆಯುತ್ತ ನಡೆಯಿತು. ಅಷ್ಟರಲ್ಲಿ ಕಲಬುರ್ಗಿಯ ಬ್ರಹ್ಮಪುರದ ದೊಡ್ಡಪ್ಪಗೌಡರು ಕಳುಹಿಸಿಕೊಟ್ಟಿದ್ದ ಮೂಗಳ ಜೋಳವೂ ಬಂದು ಮುಟ್ಟಿದವು. ತಾನು ಕೊಡಬೇಕಾಗಿದ್ದ (ಕೈಗಡ ತಂದಿದ್ದ) ಮೂಗಳ ಜೋಳವನ್ನು ಕೊಟ್ಟು ಋಣಮುಕ್ತನಾಗಿ ಅವರಾದಿ ದಂಡರಾಯಗೌಡನನ್ನು ಮುಂದಕ್ಕೆ ಕರೆದು— ಗೌಡರೇ, ಸಾಕ್ಷಾತ್ ಶಕ್ತಿಯ ಗುಣರೂಪನೂ, ಸರ್ವಸಮರ್ಥನೂ, ಆದ ನಂದೀಶ್ವರನು ಭೂ-ಲೋಕದಲ್ಲಿ ಅವತರಿಸಿ, ಭೂ-ದೇವಿಯ ದುಃಖವನ್ನು ಪರಿಹರಿಸಿದ ಮತ್ತು ಆತನ ಸಹಾಯಾರ್ಥವಾಗಿ ಪ್ರಮಥಗಣಗಳು ಭೂಮಿಯಲ್ಲಿ ಜನಿಸಿ, ವೀರಶೈವಾಚಾರವಿಧಿಗಳನ್ನು ದಶದಿಕ್ಕುಗಳಿಗೆ ಹರಡಿದ ಆ ಮಹಾನುಭಾವರಾಳಿದ ಭೂ-ಕೈಲಾಸವಾದ ಕಲ್ಯಾಣವನ್ನು ನಾನು ಎಂದು ನೋಡುವೆನೋ ಎಂಬೀ ಬಯಕೆಯನ್ನು ಪೂರ್ತಿಮಾಡಿಕೊಳ್ಳುವದಕ್ಕಾಗಿ ಇಂದು ಕಲ್ಯಾಣಕ್ಕೆ ಪ್ರಯಾಣಬೆಳೆಸಿರುವೆನು. ಮುಂದೆ ನಡೆಯಲಿರುವ ವೀರಶೈವ ಮತೋದ್ಧಾರಕ್ಕೆ ತಕ್ಕ ರಂಗಸ್ಥಳವೊಂದನ್ನು ಕಲ್ಪಿಸಬೇಕಾಗಿದೆ. ಪ್ರಯುಕ್ತ ಹೋಗುವೆನೆಂದು ಹೇಳಿ, 'ರಾಮಜಿ' ಸಮೇತನಾಗಿ, ಮಹಾಜ್ಞಾನಿಯಾದ ಶರಣಬಸವೇಶ್ವರನು ಕಲ್ಯಾಣ ಪಟ್ಟಣಕ್ಕೆ ಹೊರಟುಹೋದನು.

ಅವರಾದಿಯನ್ನು ಬಿಟ್ಟು ಶರಣಬಸವೇಶ್ವರನು, ಹಾಗರಗುಂಡಿಗೆ ಮತ್ತು ಪರುತಾಬಾದಿಯಮೇಲಿಂದ ಹಾಯ್ದು ಮಾರ್ಗದಲ್ಲಿ ಅನೇಕ

ಪವಾಡಗಳನ್ನು ಮಾಡುತ್ತ ಕಲಬುರ್ಗಿಗೆ ಬಂದು, ಬ್ರಹ್ಮಪುರದ ದೊಡ್ಡಪ್ಪಗೌಡರನ್ನು ಕಂಡನು.

ಆಗ ಬ್ರಹ್ಮಪುರದ ದೊಡ್ಡಪ್ಪಗೌಡನೂ ಆತನ ಧರ್ಮಪತ್ನಿಯಾದ "**ನೀಲಮ್ಮ**" ಗೌಡಶಾನಿಯೂ, ಶರಣರ ಪಾದದಮೇಲೆ ತಮ್ಮ ಮಸ್ತಕವನ್ನಿರಿಸಿ, ಉಚಿತ ಮರ್ಯಾದೆಯೊಡನೆ ಭಯ–ಭಕ್ತಿಗಳಿಂದ, ರಾಮಜಿಯನ್ನು ಸಹಿತ ಶರಣಬಸವೇಶ್ವರನನ್ನು ಯೋಗ್ಯ ಬಿಡಾರದಲ್ಲಿರಿಸಿ, ಜಂಗಮರನ್ನು ತೃಪ್ತಿಪಡಿಸಿ, ಇಂದಿಗೆ ನಾನೂ ನನ್ನ ಮನೆತನದವರೂ ಧನ್ಯರಾದೆವೆಂದು ತಿಳಿದು ಬಹಳ ಆನಂದದಿಂದ ಶರಣಬಸವೇಶ್ವರನ ಸೇವೆಯಲ್ಲಿ ತತ್ಪರರಾದರು. ಶರಣಬಸವೇಶ್ವರನು ಶಿವಯೋಗದಿಂದ ನಿಬ್ಬೆರಗಾಗಿ ಮೂರುದಿನಗಳ ಕಾಲಕಳೆದು ರಾಮಜಿಯೊಡನೆ ಕಲ್ಯಾಣಕ್ಕೆ ಹೋಗಲುದ್ಯುಕ್ತನಾದನು. ಆಗ "**ದೊಡ್ಡಪ್ಪಗೌಡನೂ**" ಆತನ ಧರ್ಮಪತ್ನಿ "**ನೀಲಮ್ಮಗೌಡಶಾನಿ**" ಯೂ, ಶರಣಬಸವೇಶ್ವರನ ಪಾದಗಳನ್ನು ಹಿಡಿದು, ನಮ್ಮಲ್ಲಿಯೇ ತಾವು ದಾಸೋಹ ನಡೆಸುತ್ತ ವಾಸಮಾಡಬೇಕಾಗಿ ಬೇಡಿಕೊಳ್ಳಲು, ಶರಣಬಸವೇಶ್ವರನು, ದೊಡ್ಡಪ್ಪಗೌಡರೇ, ಇನ್ನು ಕೆಲವೇ ದಿನಗಳಲ್ಲಿ ತಮ್ಮ ಭಾಗಕ್ಕೆ ದೊಡ್ಡ ಬರಗಾಲ ಬರತಕ್ಕದ್ದಿದೆ, ಕಾರಣ ಯೋಜನಾ ಪರಪರನಾಗಿದ್ದೇನೆಂದು ಹೇಳಿದನು. ದೊಡ್ಡಪ್ಪಗೌಡನು ಶಿರಿಯಿಂದಲೂ ಗುಣದಿಂದಲೂ ಆಚಾರದಿಂದಲೂ ಕೂಡಿದವನಾಗಿ ಜಂಗಮನ ಪ್ರಸಾದವಿಲ್ಲದೆ ಊಟವಿಲ್ಲೆಂಬ ನಿಯಮವನ್ನು ಹಿಡಿದು ಅದನ್ನೇ ನಡಿಸುತ್ತ ಎಲ್ಲರ ಪ್ರೀತಿಗೂ ಪಾತ್ರನಾಗಿದ್ದನು. ಶರಣಬಸವೇಶ್ವರನು ಆಡಿದ ಮಾತನ್ನು ಕೇಳಿ ದೊಡ್ಡಪ್ಪಗೌಡನು, ಈ ಪ್ರಕಾರವಾಗಿ ನುಡಿದನು. ಸ್ವಾಹಾ! ಬುದ್ಧಿಯೆಂಬ ಯಂತ್ರದಿಂದ ಮಾತುಗಳೆಂಬ ಕಸವನ್ನು ತೆಗೆದು ಶಿವಸ್ತುತಿಯೆಂಬ ಕಾಲುವೆ–ಬಿಡಿಗಾಲುವೆಗಳಿಂದ ಜಂಗಮಚರಿತ್ರವೆಂಬ ಅಮೂಲ್ಯ ಅಪಾರ ಜಲ

ರಾಶಿಯನ್ನು ತಮ್ಮ ಮನವೆಂಬ ಗದ್ದೆಯಲ್ಲಿ ಬಿತ್ತಿದ ಗುರು–ಶಿವ–ಭಕ್ತಿಯೆಂಬ ಭತ್ತಕ್ಕೆ ಹಾಯಿಸಿ (ಕಟ್ಟಿ) ಬೆಳೆಯುನ್ನುಣ್ಣುವ ಈ ನಿಮ್ಮ ಭಕ್ತಿಸಿಗೆ ಬರಗಾಲದ ಅಂಜಿಕೆಯೇ ಇಲ್ಲ ಎಂಬುದಾಗಿ ಬೆಸಗೊಂಡನು.

ಆಗ ಪರಮ ಕಾರುಣ್ಯ ಮೂರ್ತಿಯಾದ ಶರಣಬಸವೇಶ್ವರನು ಅವರ ಪ್ರೇಮಭಾವಕ್ಕೆ ಮೆಚ್ಚಿ ಕಲ್ಯಾಣಕ್ಕೆ ಹೋಗುವದನ್ನು ನಿಲ್ಲಿಸಿದನು. ತನ್ನ ಲೀಲೆಯಿಂದ ಶರಣನು ಮನ್ನಣೆಯ ಭಕ್ತಾವಳಿಗಳಿಂದ ಕೂಡಿಕೊಂಡು ಪ್ರೇಮದಿಂದ ಶಿವಲೀಲೆಗಳನ್ನು ಕೇಳುತ್ತ, ಮಹಾದಾಸೋಹವನ್ನು ನೆಡೆಸುತ್ತ ಆನಂದಮಯನಾಗಿದ್ದನು. ದೊಡ್ಡಪ್ಪಗೌಡನ ಅಣ್ಣಂದಿರಾದ ಮೂವ್ವರು, ತಮ್ಮ ತಮ್ಮ ಹೆಂಡರ ಚಿತಾವಣೆಯಿಂದ ಬೇರೆಯಾದರು. ದೊಡ್ಡಪ್ಪಗೌಡನಿಗೆ ಮಾತ್ರ ದೆವ್ವ ಸೇರಿಕೊಂಡಿದ್ದ ಮನೆಯೊಂದು ಪಾಲಿಗೆಬಂತು. ಅದನ್ನೇ ಕೈಲಾಸವೆಂದು ಭಾವಿಸಿ, ದೊಡ್ಡಪ್ಪಗೌಡನು, ಶರಣರ ತ್ರಿಕಾಲ ಲಿಂಗಪೂಜೆಗೂ ದಾಸೋಹ, ನೇಮನಿತ್ಯಾದಿಗಳನ್ನು ನಡಿಸಲಿಕ್ಕೂ, ಯೋಗ್ಯಸ್ಥಳವಾಗಿದೆ ಎಂದು ಗೃಹಪ್ರವೇಶಮಾಡಿದನು. ಶರಣಬಸವೇಶ್ವರನಂತೂ ಆ ದೆವ್ವನಮನೆಯೇ ಭೂ–ಕೈಲಾಸವೆಂದು ಭಾವಿಸಿ ಪ್ರಮಥಗಣಂಗಳೊಡನೆ ಶಿವಪೂಜಾಮನೆಯನ್ನು ಪ್ರವೇಶಿಸಿ, ಜ್ಯೋತಿಯನ್ನು ಬೆಳಗಿಸಿದನು. ಅಂದಿನ ಜ್ಯೋತಿಯೇ ಇಂದಿನ ವರೆಗೂ ಅಖಂಡ ನಂದಾದೀವಿಗೆಯಾಗಿ ಬೆಳಗುತ್ತಲಿರುವದು. ದೊಡ್ಡಪ್ಪಗೌಡನ ಧರ್ಮಪತ್ನಿ ನೀಲಮ್ಮಗೌಡಶಾನಿಯು, ಸದ್ಭಕ್ತಳೂ ಗುಣಶಾಲಿಯೂ ಆಗಿ, ಪತಿಗೆ ಅನುಕೂಲಿಯಾಗಿ ಶರಣಬಸವೇಶ್ವರನ ಸೇವೆಗಾಗಿ, ತತ್ಪರಳಾಗಿ ದಾಸೋಹವನ್ನು ಸಾಗಿಸಹತ್ತಿದಳು. ಆದರೆ ಶರಣರ ಸೇವೆಯ ಮಹಿಮೆಯಿಂದ,

**ಪದ್ಯ॥ ಪಿತನಿಂದ ಬಾಲ್ಯದೋಳ್ । ಪತಿಯಿಂದ ಪ್ರಾಯದೋಳ್।**
**ಸುತನಿಂದ ವೃದ್ಧಾಪ್ಯದೋಳ್ । ಕುಲಸ್ತ್ರೀ–ಸುರಕ್ಷಿತೆಯಾಗದಿದಿರ್ದೊಡ**
**ವಳಿಂದ ನಿಜವಂಶ ಕುಪಸತಿ ಬಂದುದಲ್ಲದಿರದು ॥೧॥**

ಎಂಬುದನ್ನು ಅರಿತವಳಾಗಿದ್ದುದರಿಂದ ನಿಜವಾದ ಯಜಮಾನತ್ವವನ್ನು ಗಂಡನಮೇಲೆಯೇ ಇಟ್ಟು ಮನೆತನವನ್ನು ಸಾಗಿಸುತ್ತಿದ್ದಳು. ಇವಳು ರತಿಯಂತೆ ರೂಪವತಿಯೂ, ಭೂ–ದೇವಿಯಂತೆ ಶಾಂತಶೀಲಳೂ, ಹರ–ಗುರು–ಭಕ್ತಿಯಲ್ಲಿ ಉಡುತಡಿಯ ಮಹಾದೇವಿಯೂ ಎನಿಸಿ, ಗಂಡನ ಅಪ್ಪಣೆಯಂತೆ ವರ್ತಿಸುತ್ತ ಶರಣಬಸವೇಶ್ವರನ ಸೇವಾತತ್ಪರಳಾಗಿದ್ದಳಲ್ಲದೆ ಶರಣಬಸವೇಶ್ವರನ ಸದ್ಭಕ್ತರನ್ನೂ, ಅನುಭವಶಾಸ್ತ್ರಗಳನ್ನು ಹೇಳಬಂದವರನ್ನೂ, ಶಿವಪಂಚಪಿಂಶತಿಲೀಲೆಗಳನ್ನು ಹೇಳುವವರನ್ನೂ, ಪ್ರಮಥರವಚನಗಳನ್ನು ವಿಸ್ತರಿಸುವವರನ್ನೂ, ಯೋಗಶಾಸ್ತ್ರಗಳನ್ನು ತಿಳಿಸುವವರನ್ನೂ ಸದುಪದೇಶಕರನ್ನು ಕುರುಡ, ಕುಂಟ, ಅಂಗಹೀನ ನಿರ್ಗತಿಕರನ್ನೂ ಸತ್ಕಾರಮಾಡುತ್ತಿದ್ದಳು. ದಾಸೋಹಕ್ಕಾಗಿ ಹಗಲಿರಳು ಜೀವದ ಪರವೇ ಇಲ್ಲದೆ ದುಡಿಯುತ್ತಿದ್ದಳು.

ಶರಣಬಸವೇಶ್ವರನಿಗಂತೂ ಅಹಂಕಾರದ ಸೋಂಕಿಲ್ಲ; ನೀನು ನಾನೆಂಬ ಭೇದಭಾವನೆಯಿಲ್ಲ. ಅವನ ಮನದ ಘನತೆ, ಹೃದಯದ ವೈಶಾಲ್ಯ ಅಪ್ರತಿಮವಾಗಿದ್ದು ಐಕ್ಯಸ್ಥಳದಲ್ಲಿ ನಿಂತು ಮಾಡಿದೆನೆಂಬ ಮನದಲ್ಲಿ ಹೊಳೆಯದ ಮಹಾಯೋಗಿಯಾಗಿದ್ದನು.

ದೊಡ್ಡಪ್ಪಗೌಡನ ಧರ್ಮಪತ್ನಿಯಾದರೂ ಐಕ್ಯಸ್ಥಲದ ವೀರಮಾತೆಯೆಂದು ಹೇಳಿದರೂ ತಪ್ಪಾಗಲಾರದು.

ಅಂದು ಹೋಳೀಹುಣ್ಣಿವೆ. ಶರಣಬಸವೇಶ್ವರನ ಕುಲದೈವತವಾದ ಗುಡಗುಂಟಿ ಅಮರೇಶ್ವರನ ರಥೋತ್ಸವವಿದ್ದುದರಿಂದ ಅಮರೇಶ್ವರನಿಗಾಗಿ ಏರ್ಪಡಿಸಿದ, ವಿಶೇಷ ಗಣಾರಾಧನೆಯನ್ನು ಪೂರ್ಣಗೊಳಿಸಲಿಕ್ಕೆ ಅನುಭವ ಮಂಟಪದಿಂದ, ಗುಡುಮಂಟಪವನ್ನು ಪ್ರವೇಶಿಸಿದರು. ಮುಂದೆ ಕೆಲವು ದಿನಗಳಲ್ಲಿಯೇ ಶರಣರು ಅನಂತ ಪವಾಡಗಳನ್ನು ಮಾಡಿದರು. ಕಣ್ಣಿಲ್ಲದವರಿಗೆ ಕಣ್ಣನ್ನೂ, ಕಾಲಿಲ್ಲದವರಿಗೆ ಕಾಲನ್ನೂ

ಕುಷ್ಟರೋಗ, ಪಾಂಡುರೋಗ, ಕ್ಷಯ, ಅತಿಸಾರ, ಹಿರೇಬೇನೆ, ಮುಂತಾದ ಅನೇಕ ರೋಗಿಗಳ ರೋಗಗಳನ್ನು ತೀರ್ಥಪ್ರಸಾದದಿಂದಲೇ ಗುಣಪಡಿಸಿದರು. ಸಂತಾನಾಪೇಕ್ಷೆಗಾಗಿ ನಂಬಿ ಬರುತ್ತಿರುವ ಭಕ್ತರಿಗೆ ಮಕ್ಕಳನ್ನು ಕೊಟ್ಟರು. ಇನ್ನೇನು ಶರಣಬಸವೇಶ್ವರನನ್ನು ನಂಬಿದ ಭಕ್ತರು, ಧನಧಾನ್ಯ ಸಂಪನ್ನರಾಗಿಯೂ, ಇಹಪರಗಳ ಸುಖಭೋಗಿಗಳಾಗಿಯೂ, ಇಚ್ಛಾಪೂರ್ತಿಗೊಳ್ಳುತ್ತಿದ್ದರು.

ಒಂದಾನೊಂದು ಅಡವಿಯಲ್ಲಿ ಘಟಸರ್ಪವು ಓರ್ವ ವಿಪ್ರನನ್ನು ಕಚ್ಚಿ ಹುತ್ತಿನೊಳಗೆ ಸೇರುವಷ್ಟರಲ್ಲಿ ನಮ್ಮ ಶರಣಬಸವೇಶ್ವರನು, ಸಂಚಾರ ಮುಗಿಸಿಕೊಂಡು ಬರುವ ಮಾರ್ಗದಲ್ಲಿಯೇ ನಡೆದ ಈ ಸಂಗತಿಯನ್ನು ತಿಳಿದು ನಾಗರಾಜಾ ಬೇಗ ಹೊರಬಂದು ನೀನು ಬಿಟ್ಟಿರುವ ವಿಷವನ್ನು ಪುನಃ ಹೀರಿಕೊಂಡು ಇವನಿಗೆ ಪ್ರಾಣದಾನ ಕೊಡಲೇ ಬೇಕೆಂದು ಹುತ್ತಿನೊಳಗಿರುವ ನಾಗರಹಾವನ್ನು ಕುರಿತು ಅಪ್ಪಣೆಯನ್ನಿತ್ತನು. ಶ್ರೀಶರಣಬಸವೇಶ್ವರನ ಅಪ್ಪಣೆಯಂತೆ ನಾಗರಹಾವು ಹುತ್ತಿನೊಳಗಿಂದ ಹೊರಬಂದು, ಮೃತವಾಗಿದ್ದ ವಿಪ್ರನ ಶರೀರದೊಳಗಿನ ವಿಷವನ್ನು ಮತ್ತೊಮ್ಮೆ ಕಚ್ಚಿ ಸುರ್ರನೇ ಹೀರಿಕೊಂಡದ್ದರಿಂದ ಮೃತಪಟ್ಟ ವಿಪ್ರವರ್ಯನು ಥಟ್ಟನೆದ್ದು ಶ್ರೀಶರಣಬಸವೇಶ್ವರನನ್ನು ಅನಂತ ರೀತಿಯಾಗಿ ಕೊಂಡಾಡಿದನು.

ಓರ್ವ ಕಾಮಾಂಧನು ಪತಿವ್ರತೆಯನ್ನು ಬಲಾತ್ಕಾರದಿಂದ ಮುಡಿಹಿಡಿದು ಜಗ್ಗುವಷ್ಟರಲ್ಲಿ ಮಹಾಪತಿವ್ರತೆಯಾದ ಸ್ತ್ರೀಯಳು ಶ್ರೀ ಶರಬಣಬಸವೇಶ್ವರನ ಆಣೆ ನನ್ನನ್ನು ಮುಟ್ಟಬೇಡೆಂದು ಚೀರಲಾಗಿ, ಕಾಮಾಂಧನ ಕಾಮವೇ ನಷ್ಟವಾಗಿ, ಶರೀರವೇ ನಾಶವಾಯಿತು. ಆಗ ಕಾಮಾಂಧನು ಪತಿವ್ರತೆಯ ಚರಣಗಳನ್ನು ಹಿಡಿದು ನಮಸ್ಕರಿಸಲಾಗಿ ಮೊದಲಿದ್ದಂತೆ ಅವನ ಶರೀರವು ಕಾಂತಿಯುತವಾಯಿತು.

ಹೋಳಿಹುಣ್ಣಿವೆಯ ದಿವಸ ಲಾವಕರು ಹೆಣಮಾಡಿ ಸೆದಿಗೆಯ ಮೇಲೆ ಹಾಕಿಕೊಂಡು ಶಂಖವಾದ್ಯ ಮಾಡುತ್ತ ಶ್ರೀ. ಶರಣಬಸವೇಶ್ವರನ ಮುಂದಿಳಿಸಿ ಈ ಹೆಣಕ್ಕೆ ಪ್ರಾಣಪ್ರತಿಷ್ಠೆ ಮಾಡಬೇಕೆಂದು ಕೇಳಿಕೊಂಡರು. ಆಗ, ಶ್ರೀಶರಣಬಸವೇಶ್ವರನು, ಈ ಹೆಣವನ್ನು ಸುಡುಗಾಡಿಗೆ ವೈದು ದಹನ ಮಾಡಿರೆಂದು ಅಪ್ಪಣೆಯನ್ನಿತ್ತನು. ಆಗಲೇ ಆ ಲಾವಕರು, ಸೆದಿಗೆಯ ಮೇಲಿರುವ ಹುಡುಗನನ್ನು ಎಬ್ಬಿಸಲಾಗಿ ನಿಜವಾಗಿಯೂ ಸತ್ತಿದ್ದನು. ಅದನ್ನು ಕಂಡು ಲಾವಕರೂ ಪುರಜನಗಳೂ, ಶ್ರೀಶರಣಬಸವೇಶ್ವರನನ್ನು ಪ್ರಾರ್ಥಿಸಿಕೊಂಡದ್ದರಿಂದ, ಮೃತಪಟ್ಟ ಹುಡುಗನನ್ನು ಪುನಃ ಜೀವದಾನವನ್ನಿತ್ತು ಎಬ್ಬಿಸಿದನು.

ಅಡವಿಯಲ್ಲಿ ಓರ್ವ ಸಜ್ಜನನು ಗುಡಿಯನ್ನು ಕಟ್ಟಿಸುತ್ತಿದ್ದು ಗೋಡೆಯನ್ನು ಕಟ್ಟುವವನಿಗೆ ಶ್ರೀಶರಣಬಸವೇಶ್ವರಾ ಎಂದು ಒಂದೊಂದೇ ಕಲ್ಲನ್ನು ಮೇಲಕ್ಕೆತ್ತಿ ಕೊಡುತ್ತಿದ್ದನು. ಆಗ ಶ್ರೀಶರಣಬಸವೇಶ್ವರನ ಪವಾಡ ಮಹಿಮೆಯಿಂದ ನೆಲದಮೇಲೆ ಬಿದ್ದಿರುವ ಕಲ್ಲುಗಳು ಒಂದೊಂದೇ ಮೇಲೇರಿ ಕ್ಷಣಮಾತ್ರದೊಳಗಾಗಿ, ಗುಡಿಯನ್ನು ಕಟ್ಟಿ ಮುಗಿಸಿದನು. ಅಂದಿನಿಂದ ಇಂದಿನವರೆಗೂ ಶ್ರೀಶರಣಬಸವೇಶ್ವರನ ಪವಾಡ ಗುಡಿಯೆಂದು ಹೆಸರುಬಿದ್ದಿದೆ.

ಬಂದೇನವಾಜ ದರಗಾದ ಮಹಾದ್ವಾರವನ್ನು ಮುಚ್ಚಿಕೊಂಡು ಬಂದೇನವಾಜನಿಗೆ ಗಂಧಲೇಪನ ಮಾಡುತ್ತಿರುವಾಗ, ಶ್ರೀಶರಣಬಸವೇಶ್ವರನು ಮುಸಲ್ಮಾನ ಬಂಧುಗಳ ಮುಂದೆ ನಿಂತುಕೊಂಡಿದ್ದನು. ಆಗವರು ಹಿಂದುಗಳಿಗೆ ಒಳಗೆ ಬರಲು ಅವಕಾಶವಿಲ್ಲವೆಂದು ಹೊರಗೆ ಹಾಕಿ ಬಾಗಿಲುಗಳನ್ನು ಮುಚ್ಚಿಕೊಂಡರು. ಮುಂದೆ ಒಂದೆರಡು ನಿಮಿಷದೊಳಗಾಗಿ, ಶ್ರೀಶರಣಬಸವೇಶ್ವರನು ಮತ್ತೊಮ್ಮೆ ಅವರೆದುರು ಬಂದು ನಿಲ್ಲಲಾಗಿ, ಮುಸಲ್ಮಾನ ಬಂಧುಗಳು ಶ್ರೀಶರಣಬಸವೇಶ್ವರನನ್ನು ಬಹುರೀತಿಯಾಗಿ ಸ್ತುತಿಸಿ ತಪ್ಪು ಒಪ್ಪಿ ಬಿಳ್ಕೊಟ್ಟರು.

ಒಬ್ಬ ಕಟುಗನು ಒಂದು ಆಕಳನ್ನು ಕೊಲ್ಲುವ ಸಮಯಕ್ಕೆ ಶ್ರೀಶರಣನು, ನಾನಾಬಗೆಯ ಉಪದೇಶಗಳನ್ನು ಮಾಡಿದ್ದರಿಂದ ಕಟುಗನು ಸುರಭಿಯನ್ನು ಕೊಲ್ಲದೆ, ಅದನ್ನು ಪೂಜಿಸಿ, ಶ್ರೀ ಶರಣಬಸವೇಶ್ವರನ ಪಾದಕ್ಕೆ ಸಮರ್ಪಿಸಿ, ಅಂದಿನಿಂದ ಹೇಯಕಾರ್ಯವನ್ನೇ ಅವನು ಬಿಟ್ಟುಕೊಟ್ಟನು.

ಓರ್ವ ಕ್ಷೌರಿಕನು, ತನ್ನ ರೂಪವತಿಯಾದ ಹೆಂಡತಿಯನ್ನು ಬಿಟ್ಟು ಕ್ಷಣಕಾಲವಾದರೂ ಅಗಲುತ್ತಿದ್ದಿಲ್ಲ. ತನ್ನ ಮನೆಯ ಮುಂದೆ ಕುಳಿತುಕೊಂಡು ಬಂದವರ ಕ್ಷೌರಮಾಡುತ್ತಿದ್ದನು. ಒಂದು ದಿನ ಕ್ಷೌರಕ್ಕೆ ಕುಳಿತಾಗ, ಓರ್ವ ಒಕ್ಕಲಿಗನು ಬತ್ತೀಕಟ್ಟೆ ಕ್ಷೌರಿಕನ ಹೆಂಡತಿಗೆ ಬೆಂಕಿಯನ್ನು ಬೇಡಿದನು. ಆಗವಳು ಕನಿಕರದಿಂದ ಬೆಂಕಿಯನ್ನು ತಂದು ಒಗೆಯಲಾಗಿ, ಕ್ಷೌರಿಕನು ಸಿಟ್ಟಿಗೆದ್ದು ಇವನಿಗೂ ತನ್ನ ಹೆಂಡತಿಗೂ ಸಮ್ಮಂಧವಿದೆಯೆಂಬ ಸಂಶಯವುಳ್ಳವನಾಗಿ, ಕೈಯಲ್ಲಿರುವ ಕತ್ತಿಯನ್ನೇ ಮಸೆಯುತ್ತ ಹೆಂಡತಿಯನ್ನು ಕೊಲ್ಲಲುದ್ಯುಕ್ತನಾಗಿ, ಮನೆಯೊಳಗೆ ಹೊಕ್ಕನು. ಆಗವಳು ಅಂಜಿ, ಥಟ್ಟನೆ ಬಾಗಿಲವನ್ನು ಹಾಕಿ ಭದ್ರವಾಗಿ ಚಿಲಕಗಳನ್ನು ಜಡಿದು ಶ್ರೀಶರಣಬಸವೇಶ್ವರನ ಸ್ತೋತ್ರ ಮಾಡಲಾಗಿ, ಒಂದಿನ ಗೋಡೆಯು ಶೀಳಿ ಹೋಳಾಯಿತು. ತಕ್ಷಣವೇ ಅವಳು ಅಲ್ಲಿಂದ ಪಾರಾಗಿ ಶ್ರೀ ಶರಣಬಸವೇಶ್ವರನ ದಾಸೋಹದ ಭೋಜನಶಾಲೆಯನ್ನು ಹೊಕ್ಕಳು. ಅವಳ ಗಂಡನಾದರೂ ಇದನ್ನು ತಿಳಿದು ಶ್ರೀಶರಣಬಸವೇಶ್ವರನ ದಾಸೋಹದ ಮನೆಯನ್ನು ಪ್ರವೇಶಿಸಿ ನೋಡಲಾಗಿ ಅಲ್ಲಿರುವ ಎಲ್ಲ ಸ್ತ್ರೀಯರೂ ತನ್ನ ಹೆಂಡತಿಯಂತೆ ಕಾಣಲಾಗಿ, ಗದ–ಗದನೆ ನಡುಗಿ ಶ್ರೀಶರಣರ ಪಾದಪದ್ಮಂಗಳನ್ನು ಪಿಡಿದು ಅಂಗಲಾಚಿಪ್ರಾರ್ಥಿಸಿಕೊಂಡನು ಆಗ ಶರಣರು ಕೃಪೆದೋರಿ ತಮ್ಮಾ ಮಹಾಪತಿವ್ರತೆಯಾದ ನಿನ್ನ ಹೆಂಡತಿಯ ಮೇಲೆ ನಿನ್ನ ಆರೋಪವೇ ಹುಚ್ಚಪ್ಪಾ....! ಅಕೋ ನೋಡು; ಅಲ್ಲಿ ಒರುತ್ತಿರುವ ನಿನ್ನ ಹೆಂಡತಿಯನ್ನು

ಶುದ್ಧಮನಸ್ಸಿನಿಂದ ಮನೆಗೆ ಕರೆದೊಯ್ದು ಸಂಸಾರ ಮಾಡು ಹೋಗೆಂದು ಆಜ್ಞಾಪಿಸಿ,ಆ ದಂಪತಿಗಳಿಗೆ ಆಶೀರ್ವದಿಸಿ ಕಳುಹಿಸಿಕೊಟ್ಟನು.

ವಿಪ್ರರೀರ್ವರು ಕಪಟವೇಷಗಳನ್ನು ಧರಿಸಿ, ಗಂಡ–ಹೆಂಡರಾಗಿ. ಶ್ರೀಶರಣಬಸವೇಶ್ವರನನ್ನು ನಮಸ್ಕರಿಸಿ, ನಮ್ಮ ಬಡತನವನ್ನು ಹೋಗ ಲಾಡಿಸಬೇಕೆಂದು ಪ್ರಾರ್ಥಿಸಿಕೊಳ್ಳಲಾಗಿ, ಶ್ರೀಶರಣಬಸವೇಶ್ವರನು ಒಂದುನೂರು ರೂಪಾಯಿಗಳನ್ನು ಅವರಿಗೆ ಕೊಟ್ಟು ನಿಮ್ಮ ಮಾತು ನಿಜ ವಾಗಲೆಂದು ಆಶೀರ್ವದಿಸಿದನು. ತಕ್ಷಣವೇ ಕಪಟ ಸ್ತ್ರೀವೇಷಧಾರಿ ಯಾಗಿದ್ದವನು ನಿಜವಾಗಿಯೂ ಸ್ತ್ರೀಯಾಗಿದ್ದನು. ಆಗವರು ತಮ್ಮ ತಪ್ಪನ್ನು ಒಪ್ಪಿ ಬಹುರೀತಿಯಾಗಿ ಬೇಡಿಕೊಳ್ಳಲು ಹೆಣ್ಣಾದಸ್ತ್ರೀಯಳು ಗಂಡಾಗಿ, ಪುನಃ ಪುನಃ ನಮುಸ್ಕರಿಸಿ, ಅಲ್ಲಿಂದ ಹೊರಟು ಹೋದರು.

. ಓರ್ವ ಸ್ತ್ರೀಯಳು ನನಗೆ ಮಗನನ್ನು ಕೊಟ್ಟರೆ ತಮ್ಮ ದಾಸೋ ಹಕ್ಕಾಗಿ, ನನ್ನ ತವರೂರವರು ಕೊಟ್ಟಿರುವ ಎಂಟುತೊಲೆ ಭಂಗಾರದ ಸರಿಗೆಯನ್ನು ಕೊಡುವೆನೆಂದು ಬೇಡಿಕೊಂಡಿದ್ದರಿಂದ, ಗರ್ಭವತಿಯಾ ದಳು. ಆ ಬಳಿಕ ತನ್ನ ತವರೂರವರು ಕೊಟ್ಟ ಸರಿಗೆ ದೊಡ್ಡದಿದ್ದ ಹೇಗೆ ಕೊಡಬೇಕೆಂದು ಮನಸ್ಸು ಹೊಯ್ದಾಡಹತ್ತಿತು. ಆಕೆಗೆ ನವ ಮಾಸಗಳು ತುಂಬಿದ್ದರೂ ಹಡೆಯಲಿಲ್ಲ. ಹಡೆಯುವ ಬೇನೆಗಳೂ ಸಿಲ್ಲ ಲಿಲ್ಲ. ಅದನ್ನು ಕಂಡು ಆಕೆಯ ಗಂಡನು ಸಿಟ್ಟಿಗೆದ್ದು ಹೆಂಡತಿಯನ್ನು ಕುರಿತು ಏನೇ ,ಯಾವದೇವರಿಗಾದರೂ ಮುಡುಪುಕಟ್ಟಿ ಬೇಡಿಕೊಂಡಿ ದ್ದರೆ ಹೇಳಿಬಿಡು ಹಾಗೆ ಮಾಡುತ್ತೇನೆಂದು ಗದ್ದರಿಸಿದನು, ಆಗವಳು ಪತಿರಾಯರೇ ಹೌದು ಶ್ರೀಶರಣಬಸವೇಶ್ವರನನ್ನು ಬೇಡಿಕೊಂಡು ಬಂಜೆಯಾದ ನನಗೆ ಮಗನನ್ನು ಕೊಟ್ಟಿದ್ದಾದರೆ, ಭಂಗಾರದ ಸರಿಗೆ ಯನ್ನು ದಾಸೋಹಕ್ಕಾಗಿ ಕೊಡುತ್ತೇನೆಂದು ಬೇಡಿಕೊಂಡಿದ್ದೇನೆಂದು ಹೇಳಿದಳು. ತಕ್ಷಣವೇ ಆಕೆಯ ಗಂಡನು ಅವಳಿಂದ ಸರಗಿಯನ್ನು ಪಡೆದುಕೊಂಡು ಓಡುತ್ತ ಹೋಗಿ ಶ್ರೀಶರಣಬಸವೇಶ್ವರನ ಮುಂದಿಟ್ಟ,

ಎಲ್ಲ ಸಂಗತಿಯನ್ನೂ ವಿವರಿಸಿ ಹೇಳಿದನು. ಆಗ ಶ್ರೀಶರಣಬಸವೇಶ್ವರನು ಒಳ್ಳೇದು ? ಹಾಗೇ ಆಗಲೆಂದು ಸರಿಗೆಯನ್ನು ತಕ್ಕೊಂಡು ಆಶೀರ್ವಾದಿಸಿದನು. ಕೂಡಲೇ ಅವನು ಓಡುತ್ತ ಮನೆಗೆ ಬರಲಾಗಿ, ಹೆಂಣು ಕೂಸನ್ನು ಹೆತ್ತಿದ್ದಳು. ಮತ್ತೂ ತಾಳಲಾರದಂಥ ಬೇನೆಗಳಿದ್ದು ಹೆಂಡತಿಯು ಗತಪ್ರಾಣಳಾಗಿದ್ದಳು. ಆಗವನು ಎಲೇ ಮೂರ್ಖಶಿರೋಮಣಿಯೇ....? ಮತ್ತೇಕೆ ಇಷ್ಟು ವೇದನೆಗಳು ! ನಿನ್ನ ತಪ್ಪೇನಿರುವದೆಂದು ಕೇಳಿದನು. ಆಗವಳು ಮರೆಮಾಚದೇ ಪತಿರಾಯಾ ? ನಾನು ಎಷ್ಟಾದರೂ ತಿಳಿಗೇಡಿಯಾದ ಹೆಂಣು ! ಅಂದಬಳಿಕ ನನ್ನ ತಪ್ಪನ್ನು ಕ್ಷಮಿಸಬೇಕೆಂದು ಬೇಡಿಕೊಂಡಳು. ಅಪ್ಪ ಶ್ರೀಶರಣಪ್ಪನಿಗೆ ನಾನು ಬೇಡಿಕೊಂಡಿದ್ದ ಈ ನನ್ನ ತವರೂರಿನವರು ಕೊಟ್ಟಿದ್ದ ಎಂಟುತೊಲೆ ಸರಿಗೆಯನ್ನು ಅವರ ಪಾದಕ್ಕೆ ಸಲಿಸಿ ನೀವು ಕೊಟ್ಟಿರುವ ಸಂಣ ಸರಿಗೆಯನ್ನು ಪುನಃ ಇಸಿದುಕೊಂಡು ಬರಬೇಕೆಂದು ತಿಳಿಸಿ ಹೇಳಿದಳು. ಆಗವನು, ಸರಿಗೆಯನ್ನು ಕೈಯಲ್ಲಿ ಹಿಡಿದುಕೊಂಡು ಓಡುತ್ತಹೋಗಿ ಶ್ರೀಶರಣಬಸವೇಶ್ವರನ ಮುಂದಿಟ್ಟು ನಿಜವೃತ್ತಾಂತವನ್ನೆಲ್ಲ ನಿವೇದಿಸಿದನು. ಆಗಲಾ ಶ್ರೀಶರಣಬಸವೇಶ್ವರನು ತಮ್ಮಾ ಸಂಣಸರಿಗೆಯನ್ನು ಕೊಟ್ಟಿದ್ದಕ್ಕಾಗಿ ಹೆಂಣು ಹುಟ್ಟಿದೆ. ಈಗ ದೊಡ್ಡ ಸರಿಗೆಯನ್ನು ತಂದುಕೊಟ್ಟಿದ್ದಕ್ಕಾಗಿ ಮತ್ತೊಂದು ಗಂಡು ಹುಟ್ಟುವದೆಂದು ಹೇಳಿ ಆಶೀರ್ವದಿಸಿದನು. ಆಗವನು ಮನೆಗೆ ಬಂದು ನೋಡಲಾಗಿ ಹೆಂಡತಿಯು ಗಂಡು ಕೂಸನ್ನು ಹೆತ್ತಿದ್ದಳು.

## ಅವಸಾನ ಸಾಮಿಪ್ಯ

ಶ್ರೀಶರಣಬಸವೇಶ್ವರನು ಭಕ್ತಜನ ಕಲ್ಪವೃಕ್ಷನಾಗಿ, ಪಂಡಿತಜನ ಚಕೋರಗಳಿಗೆ ಚಂದ್ರಪ್ರಾಯನಾಗಿ, ಶಿಷ್ಯಪರಿಪಾಲಕನಾಗಿ, ದುಷ್ಟಸಂಹಾರಕನಾಗಿ, ಲೀಲೆಯಿಂದ ಮೆರೆದಿರಲೊಮ್ಮೆ, ಶಿವಪೂಜಾ ಂದ

ದಲ್ಲಿ ಏಕಾಏಕಿ ನಗಹತ್ತಿದನು. ಆಗ ದಾಸೋಹದಲ್ಲಿರುವ ಭಕ್ತಸಮೂಹವೂ ಜಂಗಮ ಮೂರ್ತಿಗಳೂ, ಚಕಿತರಾಗಿ ಸಾಷ್ಟಾಂಗವೆರಿಗಿ ಮಹಾಮಹಿಮನೇ....? ಹೊರಗಿನ ಯಾವ ಕಾರಣವೂ ಇಲ್ಲದೆ ನಕ್ಕಮರ್ಮವನ್ನು ತಿಳುಹಿಸಬೇಕೆಂದು ಕೇಳಿಕೊಳ್ಳಲು, ಶರಣಬಸವೇಶ್ವರನು, ಕೂಡಿರುವ ಮಹಾಜನಗಳ ಹಾಗೂ ಜಂಗಮ ಸಮೂಹವನ್ನು ಕುರಿತು ಅಂಥ ವಿಶೇಷವೇನೂ ಇಲ್ಲ. ಮುಂದೆ ಬೀಳಲಿರುವ ದೊಡ್ಡ ಬರಗಾಲದಲ್ಲಿ ಜನಗಳು ನಿರ್ಗತಿಗಳಾಗುವರು. ಅನ್ನನೀರಿಲ್ಲದೆ ಹಾದಿ ಹಾದಿಗಳಲ್ಲಿ ಹೆಣಗಳನ್ನು ನಾನೂ, ನೀವುಗಳೂ ಕಾಣಬಹುದು. ಇಂಥ ಆಯಕಟ್ಟಿನ ಸಂದರ್ಭದಲ್ಲಿ ಈ ಶರಣಪ್ಪನ ದಾಸೋಹವೇ ನಿಂತು ಹೋಗುವದೋ ಏನೋ ಎಂಬ ವಿಚಾರದಲ್ಲಿ ತೊಡಗಿದ್ದೆನು. ಅಷ್ಟರಲ್ಲಿಯೇ ನನ್ನ ಇಷ್ಟಲಿಂಗದಲ್ಲಿ, ಓರ್ವ ಜಂಗಮನು, ನನ್ನ ಕಡೆಗೆ ಬರುವದನ್ನು ಕಂಡೆನು. ಆತನ ಮಗನ ಲಗ್ನವಂತೆ ಮಗನಲಗ್ನಕ್ಕಾಗಿ ಒಂದು ಸರಿಗಿ ಬೇಕಂತೆ ಅದಕ್ಕಾಗಿ, ನಕ್ಕು ನಲಿಯಬೇಕಾಯಿತೆಂದು, ಹೇಳಿಬಿಟ್ಟನು.

ಇಷ್ಟು ಹೇಳುವದೊಂದೇತಡ ಜಂಗಮನು ದಾಸೋಹದಮನೆಯ ಹೆಬ್ಬಾಗಿಲಕ್ಕೆ ಬಂದು ನಿಂತೇ ಬಿಟ್ಟನು. ಅವನನ್ನು ಒಳಗೆ ಬರಮಾಡಿಕೊಂಡು ಸ್ನಾನಮಾಡಲಿಕ್ಕೆ ಹೇಳಿ ಶುದ್ಧಮಡಿಯಿಂದ ತಮ್ಮ ಬಳಿಯಲ್ಲಿಯೇ ಕರೆದು ಕುಳ್ಳಿರಿಸಿಕೊಂಡು, ತೀರ್ಥ ಪ್ರಸಾದಗಳನ್ನು ಕೊಟ್ಟು, ಎಲ್ಲರೂ ಕೂಡಿ ಅನುಭವ ಮಂಟಪದಲ್ಲಿ ತಮ್ಮ ತಮ್ಮ ಯೋಗ್ಯಾಸನಗಳಲ್ಲಿ ಕುಳಿತುಕೊಂಡ ತರುವಾಯ, ಅತಿಥಿಯಾಗಿ ಬಂದಿರುವ ಜಂಗಮನನ್ನು ಕುರಿತು— ಸ್ವಾಮಿ, ತಾವು ಏತಕ್ಕೆ ದಯಮಾಡಿಸಿದಿರೆಂದು ದೊಡ್ಡಪ್ಪಗೌಡನು ಪ್ರಶ್ನೆ ಮಾಡಿದನು? ಆಗ, ಜಂಗಮಮೂರ್ತಿಯು ದೊಡ್ಡಪ್ಪಗೌಡರೇ, ನನ್ನ ಮಗನ ಲಗ್ನವು ನಾಳೆ ಬರಲಿರುವ ವೈಶಾಖ ಮಾಸದಲ್ಲಿ ನಿಶ್ಚಯಮಾಡಿರುವೆನು. ಹೆಣ್ಣಿನವರು ಸರಿಗೆ ಇಲ್ಲದೆ ವಿವಾಹ ಮಾಡಿಕೊಡುವದಿಲ್ಲವೆಂದು ಸ್ಪಷ್ಟ ಹೇಳಿ ಕಳಿಸಿರುವರು. ಕಾರಣ

ಉದಾರ ಮನಸ್ಸಿನ ಮಹಾದೇವನಾದ ಶರಣಬಸವೇಶ್ವರನಿಂದ ಒಂಪು ಸರಿಗೆಯನ್ನು ಪಡೆದು, ನನ್ನ ಮಗನ ಲಗ್ನಮಾಡಬೇಕೆಂದೆಣಿಸಿ ಇಲ್ಲಿಗೆ ಬಂದಿರುವೆನೆಂದು ಹೇಳಿ ಶರಣರಿಗೂ ಅರಿಕೆಮಾಡಿಕೊಂಡನು. ಆಗ ಶರಣಬಸವೇಶ್ವರನು ಮಹಾಸ್ವಾಮಿಾ ಆಗಲಿ. ಲಗ್ನನೇಮಿಸಿಕೊಂಡು ಲಗ್ನವು ಸಮಿಾಪ ಬಂದಾಗ ಬರಬೇಕೆಂದು ಅಭಯವಿತ್ತನು. ಕೂಡಲೇ ಜಂಗಮಪುಂಗವನು ಹರುಷದಿಂದ ಹಾಡಿ ಹರಿಸಿ ಸಿರೋಪತೆಗೆದು ಕೊಂಡು ಅಂದೇ ತನ್ನ ನಿವಾಸಸ್ಥಾನಕ್ಕೆ ಹೊರಟುಹೋದನು.

ಮುಂದೆ ಕೆಲವೇ ದಿನಗಳು ಗತಿಸಿದ ನಂತರ ದುರ್ಭಿಕ್ಷೆಯಾಗಿ ಬರಬಿದ್ದಿತು. ಜನಗಳಿಗೆ ಅನ್ನ ನೀರುಗಳು ಸಿಗದಂತಾಗಿ, ದಾರಿದಾರಿಗೆ ತಮ್ಮ ಪ್ರಾಣಗಳನ್ನು ನೀಗುತ್ತಲಿರುವದರಿಂದ, ಕಂಡಕಂಡಲ್ಲಿ ತಲೆಬುರು ಡೆಗಳೇ ಕಾಣುತ್ತಿದ್ದವು. ಆದ್ದರಿಂದ, " ತಪೋಹಿ ಮೂಲಂ ಸರ್ವಾನಾಂ ಸಿದ್ಧಿನಾಂ ಯಜ್ಞಗತ್ರಯೇ " ಎಂದಂತೆ ಸಮಸ್ತ ಸಿದ್ಧಿಗಳಿಗೂ ಆತ್ಮೋ ದ್ಧಾರಕ್ಕೂ ತಪಸ್ಸಿನ ಮಹಿಮೆಯನ್ನರಿತ ಶರಣಬಸವೇಶ್ವರನು ತನ್ನ ಪೂಜಾಪ್ರಭಾವದಿಂದಲೂ ಕ್ರಿಯಾವಿಶೇಷದಿಂದಲೂ, ಶಿವಸಾಕ್ಷಾತ್ಕಾರ ವನ್ನು ಹೊಂದಿ, ಪ್ರಭೋ....! ಈ ಭಾಗದಲ್ಲಿ ದುರ್ಭಿಕ್ಷೆಯು ಭಯಂಕರವಾಗಿ ಜನಜೀವನವನ್ನು ನಾಶಮಾಡುತ್ತಿರುವದರಿಂದ ನನ್ನ ದಾಸೋಹವೂ ನಡೆಯದಂತಾಗಿರುವದೆಂದು ಬಿನ್ನವಿಸಿದನು. ತತ್ ಕ್ಷಣವೇ ಪರಮಾತ್ಮನು ತ್ಯಾಗವೀರ ಶರಣಪ್ಪನೇ ಸಂತಾನವಿಲ್ಲದವರಿಗೆ ಸಂತಾನವನ್ನು ಕೊಡುವೆನೆಂದು, ನಿನ್ನ ಭಕ್ತರಾದ ಗಣವ್ಯಕ್ತಿಗಳಿಂದಲೂ ಉದಾರಿಗಳಿಂದಲೂ ಪ್ರಚಾರ ಮಾಡಿಸಿ ಐದುನೂರು ರೂಪಾಯಿ ಗೊಂದು ಹೆಂಣುಸಂತಾನವನ್ನೂ, ಸಾವಿರರೂಪಾಯಿಗೊಂದು ಗಂಡು ಸಂತಾನವನ್ನೂ ಕೊಡಬಲ್ಲೆನೆಂದು ಸಾರು ! ನಾನೆಲ್ಲವನ್ನೂ ನಡಿಸಿ ಕೊಡುವೆನೆಂದು ಅಭಯವಿತ್ತು ಕಾಣದಂತಾದನು.

ಅಂದಿನಿಂದ ಇಂದಿನವರೆಗೂ ಸಂತಾನಾಪೇಕ್ಷೆಗಾಗಿ ಸಲ್ಲಿಸಿದ ಹಣವನ್ನು ದಾಸೋಹಕ್ಕಾಗಿ ವ್ಯಯಮಾಡುತ್ತಾರೆ. ಆ ಕಾಲದ ಬರಗಾಲ ಸಮಯದಲ್ಲಿ ಆಗರ್ಭಶ್ರೀಮಂತರೂ, ದೇಸಾಯಿ, ದೇಶಪಾಂಡೆ ಗೌಡ, ನಾಡಗೌಡ, ಜಹಗೀರದಾರ, ರಾಜ-ಮಹಾರಾಜರು, ಶ್ರೀ ಶರಣ ಬಸವೇಶ್ವರನ ಹೆಸರಿನ ಮೇಲೆ ಮುಡಿಪು ಕಟ್ಟಿಟ್ಟು, ತಮಗೆ ಬೇಕಾಗಿರುವ ಗಂಡೂ–ಹೆಣ್ಣೂ ಸಂತಾನಗಳನ್ನು ಪಡೆದ, ತ್ಯಾಗವೀರರೂ, ತನು–ಮನ-ಧನಾದಿಗಳಿಂದ ಸೇವೆ ಸಲ್ಲಿಸಿ ಕೀರ್ತಿಶಾಲಿಗಳಾಗಿ ಸಂತಾನವನ್ನು ಹೊಂದಿ, ಶ್ರೀಶರಣಬಸವೇಶ್ವರನ ಕೃಪಾಶೀರ್ವಾದ ಬಲದಿಂದ ರಾರಾಜಿಸುತ್ತಿರುವ ಅಯಾಂಯ ವಂಶಜರ ಮನೆತನಗಳನ್ನು ಗುಲಬುರ್ಗಾ, ಬೀದರ, ರಾಯಚೂರು, ಸೊಲ್ಲಾಪೂರ ಜಿಲ್ಲೆಗಳಲ್ಲಿ ಈಗಲೂ ಕಾಣಬಹುದು.

ಒಂದಾನೊಂದು ದಿನ, ಕಲಬುರ್ಗಿಯ-ಮಕ್ತುಂಪುರದ ಒಮ್ಮನದವರ ಮನೆಯ ವಯೋವೃದ್ಧದಂಪತಿಗಳು (ಮುಪ್ಪಿನೆಮುದುಕರು) ತಮಗೆ ಪುತ್ರಸಂತಾನವನ್ನು ಕೊಡಬೇಕೆಂದು, ಒಂದುಸಾವಿರ ರೂಪಾಗಳನ್ನು ಶರಣಬಸವೇಶ್ವರನ ಮುಂದೆ ಸುರುವಿ ಪ್ರಾರ್ಥಿಸಿಕೊಂಡರು. ಆಗಲಾ ಶರಣರು ಮರಮರನೆ ಮರುಗಿ, ಇಂಥ ಮುಪ್ಪಿನ ಹಾಗಲಹಂಣಾದ ವೃದ್ಧದಂಪತಿಗಳಿಗೆ ಮಕ್ಕಳೆಲ್ಲಿಂದ ತರಬೇಕೆಂದು ಯೋಜಿಸಿ, ದೊಡ್ಡಪ್ಪಗೌಡನ ಪುತ್ರನು ತೊಟ್ಟಿಲಲ್ಲಿ ಆಡುವದನ್ನು ನೋಡಿ–ಅದೇ ಮಗುವನ್ನು ಈ ವೃದ್ಧದಂಪತಿಗಳ ಉಡಲಲ್ಲಿ ಹಾಕಿ ಭಾಗ್ಯಶಾಲಿಗಳಾಗಿರೆಂದು ಹರಸಿ ಕಳಿಸಿಕೊಟ್ಟನು.

ಈ ಸಂಗತಿಯನ್ನು ತಿಳಿದು ದೊಡ್ಡಪ್ಪಗೌಡನೂ ಆತನ ವೀರಪತ್ನಿ 'ನೀಲಮ್ಮಾಗೌಡಶಾನಿಯೂ ಅಪಾರ ಆನಂದಭರಿತರಾಗಿ, ಶರಣಬಸವೇಶ್ವರನ ಅಡಿದಾವರೆಗಳನ್ನು ಹಿಡಿದು ಮಹಾತ್ಮಾ ....! ನೀನು

ಕೊಟ್ಟ ಮಗನನ್ನು ನೀನೇ ಆ ವೃದ್ಧದಂಪತಿಗಳಿಗೆ ಕೊಟ್ಟಿರುವೆ ಅದ ರಲ್ಲಿ ತಪ್ಪೇನಿದೆ.....? ಎಂದು ಕೊಂಡಾಡಿ ಶರಣಬಸವೇಶ್ವರನ ಸೇವೆ ಯಲ್ಲಿ ಎಂದಿನಂತೆ ನಿರತರಾದರು.

ಮುಂದೆ ಕೆಲವು ದಿನಗಳ ತರುವಾಯ, ಶರಣಬಸವೇಶ್ವರನು ಆಜ್ಞಾಪತ್ರಿಕೆಯೊಂದನ್ನು ಹೊರಡಿಸಿ, ಸುತ್ತು ಮುತ್ತಲಿನ ಗ್ರಾಮ ಪಟ್ಟಣಗಳಲ್ಲಿರುವ ತನ್ನ ಸದ್ಭಕ್ತರಿಗೂ ಶರಣಸಂತತಿಯವರಿಗೂ, ವಿದ್ವ ಜ್ಜನಗಳಿಗೂ, ಕವಿ, ಗಮಕಿ, ವಾಂಙ್ಮ, ಸುಜ್ಞಾನಿಗಳಿಗೂ ಬರಮಾಡಿ ಕೊಂಡನು. ಭೂಮಿಯೇ ಹಡೆಯಿತೆಂಬಂತೆ ಅಸಂಖ್ಯ ಜನಗಳೂ ಬಂದು ಕೂಡಿದರು. ಆಗ ತಾನು ಈ ಮೊದಲೇ ರಚಿಸಲ್ಪಟ್ಟ ಆಸನದ ಮೇಲೆ ಕುಳಿತುಕೊಂಡು ಭೂಮಿಯಲ್ಲಿ ನಾನು ಮಾಡುವ ಕಾರ್ಯವೂ ಮುಗಿಯಿತು. ನನಗೆ ಅಮರೇಶ್ವರನ ಆಜ್ಞೆಯಾಗಿದೆ. ಗುರುಮರುಳಸಿದ್ಧ ದೇವರೂ, ಮಾರ್ಗನಿರೀಕ್ಷಣೆಯಲ್ಲಿದ್ದಾರೆ. ನಾನು ಮಾತ್ರ ಲಿಂಗದೊಳ ಡಗಬೇಕಾಗಿದೆ. ಇಂದು, ನನ್ನ ಸ್ಥಲಕ್ಕೆ ಉತ್ತರಾಧಿಕಾರಿಯೆಂದು ನಮ್ಮ ದೊಡ್ಡಪ್ಪಗೌಡನಿಗೆ ನೀವೆಲ್ಲರೂ ಸೇರಿ ಗದ್ದುಗೆಯನ್ನೇರಿಸಬೇಕೆಂದು ತಿಳಿಸಿದನು. ತತ್‌ಕ್ಷಣವೇ ಮಹಾಪುಣ್ಯಶಾಲಿಯಾದ ದೊಡ್ಡಪ್ಪಗೌಡ ನನ್ನು ಗುದ್ದುಗೆಯಮೇಲೆ ಕೂಡ್ರಿಸಿ, ಆಗಮೋಕ್ತವಿಧಾನಗಳಿಂದ ಅಧಿ ಕಾರವನ್ನು ಕೊಟ್ಟು, ಶರಣಬಸವೇಶ್ವರನು ಆಶೀರ್ವದಿಸಿದನು. ಶರಣಬಸವೇಶ್ವರನು, ದೊಡ್ಡಪ್ಪಗೌಡನಿಗೆ ದಾಸೋಹ ಮತ್ತು ಭಕ್ತರಕ್ಷಣಭಾರವನ್ನೂ ಶಿವಯೋಗದ ರಹಸ್ಯವನ್ನೂ ಭೋಧಿಸಿ ಲಿಂಗೈಕ್ಯನಾಗುವ ದಿನವನ್ನು ನಿರ್ಧರಿಸಿಹೇಳಿ ಸಮಾಧಿಯ ಸಿದ್ಧತೆಗೆ ಅಪ್ಪಣೆಯನ್ನು ಕೊಡಿಸಿದನು. ಅಂದು ಕೂಡಿರುವ ಅಸಂಖ್ಯ ಮಹಾ ಜನಗಳಿಗೆ, ಇಲ್ಲಿಂದ ಯಾರೂ ಕದಲಬಾರದೆಂದು ಸಾರಿಹೇಳಿದನು. ದೇಶಮುಖರಾದ ಸುಂದರ ದೇವರಾಯರನ್ನು ಕರೆಯಿಸಿ ಸಮಾಧಿಯು ಸಲುವಾಗಿ ಸ್ಥಲವನ್ನು ಕೊಡಬೇಕೆಂದು ಕೇಳಿಕೊಂಡನು. ಅದಕ್ಕೆ

ದೇಶಮುಖರು—ಮಹಾತ್ಮಾ ನನ್ನ ಮನೆತನದ ನಂದಿಹೋದ ಜ್ಯೋತಿಯನ್ನು ಪುನಃ ಬೆಳಗಿಸಿದ ನಿನಗೆ ದೊಡ್ಡಪ್ಪಗೌಡರ ಮನೆಯಿಂದ ಕೆರೆಯ ಪಾಳೆಯತನಕೂ ಇದ್ದ ಸ್ಥಳವನ್ನು ತ್ರಿಕರ್ಣಪೂರ್ವಕವಾಗಿ ಅರ್ಪಿಸಿದ್ದೇನೆಂದು 'ಸಾಷ್ಟಾಂಗ ನಮಸ್ಕಾರ ಮಾಡಿದನು. ಕೂಡಲೇ ದೊಡ್ಡಪ್ಪಗೌಡನು ಶ್ರೀಮಾನ್ ಸುಂದರದೇವರಾಯರು ದಾನವಾಗಿಕೊಟ್ಟ ಭೂಮಿಯನ್ನು ಅಳೆಯಿಸಿ ಲಿಂಗಮುದ್ರೆಯನ್ನು ಸ್ಥಾಪಿಸಿ, ಶಾಸ್ತ್ರೋಕ್ತವಾಗಿ, ಶರಣರ ಸಮಾಧಿಯನ್ನು ಸಿದ್ಧಪಡಿಸಿದನು.

ಶ್ರೀ ಶರಣಬಸವೇಶ್ವರನು ತನ್ನ ಅವಸಾನ ಕಾಲವನ್ನು ಕಂಡು ಹಿಡಿದು ದೊಡ್ಡಪ್ಪಗೌಡನನ್ನು ಕರೆದು ಪರುಷಮಣಿಯಲ್ಲಿರುವ ದಿವ್ಯ ಶಕ್ತಿಯನ್ನು ದಯಪಾಲಿಸಿ ತನ್ನ ನೆಚ್ಚಿನ ಲಿಂಗದಲ್ಲಿ ಐಕ್ಯನಾದನು. ತತ್‌ಕ್ಷಣವೇ ಮಹಾಜ್ಯೋತಿಯೊಂದು ಶ್ರೀ ಶರಣಬಸವೇಶ್ವರನ ಲಿಂಗದಿಂದ ಹೊರಬಿದ್ದು ಬ್ರಹ್ಮಾಂಡವನ್ನೇ ತೊಳಗಿ ಬೆಳಗಿ ಮರುಕ್ಷಣದಲ್ಲಿ ಅದೃಶ್ಯವಾಯಿತು. ಅದನ್ನು ನೋಡಿ ಮಹಾಜನಗಳು ಜಯ ಜಯಕಾರ ಮಾಡುತ್ತ ಮಂಗಲಧ್ವನಿಗೈದರು. ಅಂದು ಶ್ರೀ.ನೃ.ಶಕ ೧೭೪೪ ನೆಯ ಚಿತ್ರಭಾನು ಸಂ|| ರದ, ಫಾಲ್ಗುಣ ಕೃ|| ೧ ಗುರುವಾರ ಉತ್ತರಾ ನಕ್ಷತ್ರ ರಾತ್ರಿ ೧೨ ಗಂಟೆಗೆ ಶರಣಬಸವೇಶ್ವರನು ಲಿಂಗೈಕ್ಯನಾದನು. ಮುಂದೆ, ಫಾಲ್ಗುಣ ಕೃ|| ೫ ಚಂದ್ರವಾರ ಸ್ವಾತಿನಕ್ಷತ್ರ ರಂಗಪಂಚಮಿಯ ದಿನ ಶ್ರೀ ಶರಣಬಸವೇಶ್ವರನು, ಕಳೆದೊಗೆದ ಶರೀರವನ್ನು ಸಮಾಧಿಯಲ್ಲಿಳಿಸಿದರು. ಆ ದಿನದ ಸ್ಮರಣಾರ್ಥಕ್ಕಾಗಿ, ಈಗಲೂ ರಂಗಪಂಚಮಿಯ ದಿನವೇ ರಥೋತ್ಸವವನ್ನು ಜರುಗಿಸಿ, ಸುಂದರದೇವರಾಯ ದೇಶಮುಖರ ಮನೆತನಕ್ಕೆ ಮಾನಮರ್ಯಾದೆಗಳನ್ನು ಸಲ್ಲಿಸುತ್ತ ಬಂದಿರುವರು.

ಇನ್ನು ವಿಶೇಷವಾಗಿ ಹೇಳಬೇಕೆಂದರೆ, ಶ್ರೀ ಶರಣಬಸವೇಶ್ವರನು ಭಕ್ತನಾಗಿದ್ದರಿಂದ, ಭಕ್ತನ ಶರೀರವನ್ನು 'ಸ್ಥಾಪಿಸಲ್ಪಟ್ಟ ಗದ್ದುಗೆಯು

ಪೂಜೆಗೂ, ನಮಸ್ಕಾರಕ್ಕೂ ಯೋಗ್ಯವಾಗಲೆಂದೆಣಿಸಿ, ದೊಡ್ಡಪ್ಪಗೌಡರು ಶರಣಬಸವೇಶ್ವರನ ಗುರುಗಳಾದ, ಶ್ರೀ ಮರುಳಸಿದ್ಧದೇವರ ಮೂರ್ತಿಯನ್ನು ಬಲಕ್ಕೂ ಶ್ರೀ ಶರಣಬಸವೇಶ್ವರನ ಮೂರ್ತಿಯನ್ನು ಎಡಕ್ಕೂ ಹೀಗೆ, ಎರಡೂ ಮೂರ್ತಿಗಳನ್ನು ಒಂದೇ ದೇಹದಲ್ಲಿ ರಚಿಸಿ, ಗದ್ದುಗೆಯಮೇಲೆ ಸ್ಥಾಪಿಸಿದರು. ಆದ್ದರಿಂದ, ಗದ್ದುಗೆಯ ಪೂಜೆಗೆ ಅನುಕೂಲವೂ, ಸರ್ವಶ್ರೇಯಸ್ಸಿಗೆ ಸಾಧನವೂ ಆಗಿ, ಅಂದಿನಿಂದ ಇಂದಿನವರೆಗೂ ಪ್ರತಿಯೊಬ್ಬ ಮಾನವನಿಗೂ ಶ್ರೇಷ್ಠತಮವಾಗಿದೆ. ಪ್ರಪಂಚದಲ್ಲಿ ಪರಮಸಾರಭೂತವಾದ ಆತ್ಮಾನುಭವವನ್ನು ಸಕಲರೂ ಹೊಂದಿ, ಪ್ರಾಪಂಚಿಕ ವಿಷಯಕವಾದ ಆಶೆಗಳನ್ನು ತೊರೆದು, ಶ್ರೀ ಶರಣಬಸವೇಶ್ವರನನ್ನು ಆಶ್ರಯಿಸಿ,ಆತನ ಕೃಪೆಯನ್ನು ಸಂಪಾದಿಸಲಿಕ್ಕೆ ರಾಜಮಾರ್ಗವಾಗಿರುವದರಿಂದ, ಮಾನವಕಲ್ಯಾಣಕ್ಕಾಗಿ, ದೊಡ್ಡಪ್ಪಗೌಡರು ಮಾರ್ಗದರ್ಶಿಯಾದರೆಂದು ನಾನುಬೇರೆ ಹೇಳಬೇಕಾಗಿಲ್ಲ.

ಹೀಗಿರಲಾಗಿ, ಶ್ರೀ. ನೃ. ಶಕ ೧೭೪೫ನೆಯ "ಸ್ವಭಾನುನಾಮ" ಸಂ||ರದ ವೈಶಾಖಮಾಸದಲ್ಲಿ ಈ ಹಿಂದೆ, ತನ್ನ ಮಗನ ಲಗ್ನಕ್ಕಾಗಿ ಭಂಗಾರದ ಸರಿಗೆಯನ್ನು ಬೇಡಬಂದ ಜಂಗಮನು, ಸರಿಗೆಯನ್ನು ಬೇಡಲಿಕ್ಕೆ ಅಮರನಾದ ಶರಣಬಸವೇಶ್ವರನ ಕಡೆಗೆ ಹೊರಟಿದ್ದನು. ಸುಲೇಪೇಟೆಯ ಹತ್ತಿರ ಸಜೀವಶರಣಬಸವೇಶ್ವರನು, ತಲೆಗೆ ಮುದಿ ಸುತ್ತಿಕೊಂಡು, ಬಿಳೇಕಂಬಳಿಯನ್ನು ಹೊದ್ದುಕೊಂಡು, ನಾಗಬೆತ್ತವನ್ನು ಊರುತ್ತ ತನ್ನಕಡೆಗೆ ಬರುವ ಜಂಗಮನ ಎದುರು ಹೋಗಿ, ಮಾರ್ಗದಲ್ಲಿ ದರ್ಶನಕೊಟ್ಟು, ಸ್ವಾಮಿ—ತಾವು ತಮ್ಮ ಮಗನ ಲಗ್ನಕ್ಕಾಗಿ, ಕೊಡಮಾಡಿದ ಸರಿಗೆಯನ್ನು ಶರಣಬಸವೇಶ್ವರನಿಂದ ಪಡೆದು ಮರಳುವದಕ್ಕಾಗಿ ಹೊರಟಿರುವಿರೇನು. ? ಇಗೋ!; ಆ ಸ್ವಾಮಿ ಶರಣಬಸವೇಶ್ವರನೇ ನಾನು, ಕಾಲ್ನಡಿಗೆಯಿಂದ ಶ್ರೀಕ್ಷೇತ್ರಕ್ಕೆ ಹೊರಟಿದ್ದೇನು. ಪ್ರಯುಕ್ತ ನಾನು ಕೊಡುತ್ತೇನೆಂದು ವಾಗ್ದಾನಮಾಡಿದ ಸರಿಗೆಯನ್ನು

ಒಂದು ತಂಬಿಗೆಯಲ್ಲಿಹಾಕಿ ನಂದಾದೀವಿಗೆಯ ಖೋಲಿಯಲ್ಲಿರುವ ಚಿಲಕೀಮಾಡದಲ್ಲಿಟ್ಟು ಕೀಲಿಹಾಕಿರುವೆನು. ತಕ್ಕೊಳ್ಳಿ ಈ ಕೀಲಿಕೈ ! ಇದನ್ನು ನಮ್ಮ ದೊಡ್ಡಪ್ಪಗೌಡರ ಕೈಯಲ್ಲಿಕೊಟ್ಟು ಅವರಿಗೆ ನಾನು ಹೇಳಿದ ಸಂಗತಿಯನ್ನು ಹೇಳಿ, ತಾವು ಅವರಿಂದ ಸರಿಗೆಯನ್ನು ತಕ್ಕೊಂಡು ಹೋಗಿ, ತಮ್ಮ ಮಂಗಳಕಾರ್ಯವನ್ನು ಮುಗಿಸಿಕೊಳ್ಳಿರೆಂದು ಹೇಳಿ ಮುಂದೆಸಾಗಿದನು. ಇತ್ತ ಜಂಗಮನು, ಕಲಬುರ್ಗಿಗೆ ಹೋಗಿ ದೊಡ್ಡಪ್ಪಗೌಡರಿಗೆ ಬೀಗದಕೈ ಕೊಟ್ಟು, ಸಾದ್ಯಂತ ಸಮಾಚಾರವನ್ನು ಹೇಳಲಾಗಿ, ಶ್ರೀಮಾನ್ ದೊಡ್ಡಪ್ಪಗೌಡರು, ಆಶ್ಚರ್ಯಭರಿತರಾಗಿ ನಂದಾದೀವಿಗೆಯ ಖೋಲಿಯನ್ನು ಪ್ರವೇಶಿಸಿ, ಚಿಲಕೀಮಾಡದ ಕೀಲಿಯನ್ನು ತೆಗೆದು ನೋಡಿ, ತಂಬಿಗಿಯಲ್ಲಿದ್ದ ಸರಗಿಯನ್ನು ತಕ್ಕೊಂಡು ಜಂಗಮನಿಗೆ ಕೊಟ್ಟು, ತ್ರಿಕರ್ಣಪೂರ್ವಕವಾಗಿ ನಮಸ್ಕಾರಮಾಡಿ, ಅನಂತಪ್ರೀತಿಯಾಗಿ ಕೊಂಡಾಡಿದರು. ದೊಡ್ಡಪ್ಪಗೌಡರಂತೆ ಮಹಾಭಕ್ತಿಭಾಂಡಾರಿಯಾದ ರಾಮಜಿಯೂ ಬಂದು ಈ ಎಲ್ಲ ಸಂಗತಿಯನ್ನು ಕೇಳಿ ಸ್ವಾಮಿಾ ಜಂಗಮಮೂರ್ತಿಯೇ ನನ್ನೊಡೆಯನಾದ ಶ್ರೀ ಶರಣಬಸವೇಶ್ವರನು ಲಿಂಗದೊಳಗಾಗಿ, ಇಂದಿಗೆ, ೪೦ ದಿನಗಳಾದವೆಂದು ಹೇಳಿ, ಶರಣರ ಮಹಿಮೆ; ಹರಣದಲ್ಲಿ ನೋಡೆಂಬ ವಾಕ್ಯವನ್ನೇ ಪ್ರತಿಪಾದಿಸಿ, ಸರ್ವರಿಗೂ ತಿಳಿಹೇಳಿದನು. **ರಾಮಜಿಯೂ ಪರೂ** ಬ್ರಹ್ಮಪುರದ ಮಠಪತಿಯವರಲ್ಲಿಯೇ ಒಂಭತ್ತು ವರುಷಗಳವರೆಗೆ ಕಾಲಕಳೆದು, ಒಂದೆರಡು ಪವಾಡಗಳನ್ನು ಮಾಡಿ, ಶ್ರೀ. ಸ್ವ. ಶಾ. ಶಕೆ ೧೭೫೭ನೇ ಮನ್ಮಥನಾಮ ಸಂವತ್ಸರದಲ್ಲಿ ಶಿವಾಧೀನನಾದನು. ಅಮರ ರಾಮಜೀಯವರ ಸಮಾಧಿಯು ಕಲಬುರ್ಗಿಯ ಪುಣ್ಯಕ್ಷೇತ್ರವಾದ ಬ್ರಹ್ಮಪುರದಲ್ಲಿಯೇ ಇದ್ದು ಈ ಸಮಾಧಿಯು ಶ್ರೀ ಶರಣಬಸವೇಶ್ವರ ದೇವಸ್ಥಾನದ ಪಶ್ಚಿಮಕ್ಕೆ ಊರಲ್ಲಿಯೇ ಇದೆ. ಸಾಂಗಶಿವೈಕ್ಯ ಹೋದಾಗ ಅಥವಾ ಅವಶ್ಯವಾಗಿ ಮತೆ ಬೇಕಾದಾಗ ಬ್ರಹ್ಮಪುರದ

ಸದ್ಭಕ್ತರು ಶ್ರೀ ಅಮರ ರಾಮುಜೀಯವರ ಸಮಾಧಿಗೆ ವಿಶೇಷ ಆರಾಧನೆ ಮಾಡಿಸುತ್ತಾರೆ. ಅಂದೇ ಸಂಜೆಯ ಒಳಗಾಗಿ ಸಮೃದ್ಧಿಮಳೆಬರುತ್ತ ದೆಂದು ಹೇಳುತ್ತಾರೆ. ಇದೊಂದು ಶ್ರೀಶರಣಬಸವೇಶ್ವರ ಮಹಾನುಭಾವನು ತನ್ನ ಸದ್ಭಕ್ತ ರಾಮುಜೀದಾದಾ ಅವರಿಗಿತ್ತ ವರಪ್ರಸಾದವೆಂದು ಅನೇಕ ಮಹಾಜನಗಳಿಂದ ಕೇಳಿಕೊಂಡು ಇದನ್ನು ಇಲ್ಲಿ ಓದುಗರ ಮುಂದಿಡಲು ಕಡುಸಂತೋಷವಾಗುತ್ತದೆ.

ಶ್ರೀ ಶರಣಬಸವೇಶ್ವರನ ತರುವಾಯ ಶ್ರೀ ಶರಣಬಸವೇಶ್ವರನ ಸ್ಥಾನಾಪನ್ನರಾದ ದೊಡ್ಡಪ್ಪಗೌಡರು, ಮೂವತ್ತು ವರುಷಗಳವರೆಗೆ, ತಮ್ಮ ತಪಃಪ್ರಭಾವದಿಂದಲೂ, ಕ್ರಿಯಾವಿಶೇಷದಿಂದಲೂ ಲೋಕಕಲ್ಯಾಣಕ್ಕಾಗಿದುಡಿದು, ದಾಸೋಹವನ್ನು ನಡಿಸಿ, ಜಗತ್ಪ್ರಸಿದ್ಧರಾಗಿ, ಶ್ರೀ. ಸ್ವ. ಶಕ ೧೭೭೦ನೆಯ "**ಕೀಲಕನಾಮ**" ಸಂವತ್ಸರದಲ್ಲಿ ಲಿಂಗೈಕ್ಯರಾದರು. ಅವರ ತರುವಾಯ, ಶರಣಪ್ಪನವರೆಂಬ ಶರಣರು ೨ನೇ ಶರಣರಾಗಿ, ಅವರ ತರುವಾಯ, ಬಸವಣ್ಣೆಪ್ಪನೆಂಬ ಶರಣರು ಮೂರನೇ ಶರಣರಾಗಿ, ಅವರ ತರುವಾಯ, ಲಿಂಗಬಸಪ್ಪನೆಂಬ ಶರಣರು ನಾಲ್ಕನೇಶರಣರಾಗಿ, ಅವರ ತರುವಾಯ ಚಿಕ್ಕಶರಣಪ್ಪನೆಂಬ ಶರಣವರು ಐದನೇಶರಣರಾಗಿ, ಅವರ ತರುವಾಯ ಈಗತಾನೇ ಮಹಾವಿಭೂತಿಯಾಗಿ ಶಿವಭಕ್ತಿ, ಶಿವಾರ್ಚನೆ, ಶಿವಸ್ಮೃತ, ಶಿವಧ್ಯಾನ, ಶಿವಜ್ಞಾನಸಂಪನ್ನರಾದ ಆರನೇ ಶರಣರೂ, ಪರಮತಪಸ್ವಿಗಳೂ ಪುಣ್ಯನಿಧಿಗಳೂ ದಾಸೋಹಮೂರ್ತಿಗಳೂ ವಿದ್ಯಾದಾನ ಸಂಪನ್ನರೂ, ಭಕ್ತಜನರಕ್ಷಕರೂ, "**ಗುರು-ಲಿಂಗ-ಜಂಗಮ**"ದಲ್ಲಿ ಭಕ್ತಿಯುಳ್ಳವರೂ, ಪಾದೋದಕ ಕರಣಪ್ರಸಾದವಿಲ್ಲದೆ ಪ್ರಸಾದ ತಕ್ಕೊಳ್ಳದವರೂ ಶಿವವಿದ್ಯೆಯಲ್ಲಿ ವ್ಯಸನವುಳ್ಳವರೂ, ಆದ, **ಶ್ರೀಮಾನ್ ದೊಡ್ಡಪ್ಪಾ ಅಪ್ಪಾ ಊರ್ಫ ಶ್ರೀಶರಣಬಸಪ್ಪ** ಸಾಧೂ ಮಹಾರಾಜರವರು ವಿರಾಜಮಾನರಾಗಿ ಶೋಭಿಸುತ್ತಿರುವರು. ಇವರ ಧರ್ಮಪತ್ನಿಯವರಾದ **ಶ್ರೀಮತಿ ಗೋದೂಬಾಯಿಯವ**

**ರಾದರೂ** ಪತಿಭಕ್ತಿಪಾರಾಯಣರೂ ಜಂಗಮಪ್ರೇಮಿಗಳೂ, ಆಗಿ, ರಂಜಿಸುತ್ತಿರುವರು. ಈ ಉಭಯ ಮಹಾನುಭಾವರು ಸಕಲ ಶಿವಾಗಮ ಗಳನ್ನು ತಿಳಿದವರಾಗಿಯೂ ಕಲಿಕಲ್ಪಿತ ದುರಾಚಾರಕ್ಕೂ ವಾಗ್ಬ್ರಹ್ಮಿ ಗಳ ವೇದಾಂತಕ್ಕೂ ದೂರಾಗಿಯೂ, ಇದ್ದು ಭಕ್ತಿಸ್ಥಳವನ್ನು ಕೈಕೊಂಡು ಬಂದ ಹರ–ಗುರು–ಚರಮೂರ್ತಿಗಳನ್ನು ಸೇವಿಸುತ್ತ ಅವರೊಡನೆ ಶಿವಾನುಭವ ವಿಚಾರಗಳನ್ನು ಮಾಡುತ್ತ ಶಾಂತಚಿತ್ತರಾಗಿ ದುರಾಶೆಯನ್ನು ತೊರೆದುತ್ರಿಕಾಲ ಲಿಂಗಪೂಜಾದಿ ನೇಮನಿಷ್ಠ ರಾಗಿಯೂ, ನೀತಿ – ಜ್ಞಾನ ವೈರಾಗ್ಯಶೀಲರಾಗಿಯೂ ಯಥಾಲಾಭ ಸಂತುಷ್ಟರಾಗಿಯೂ ಈಗ ತಾನೇ ತೊಳಗಿ ಬೆಳಗುತ್ತಿರುವರು.

ಇವರು ಹೆಣ್ಣುಮಕ್ಕಳಸಲುವಾಗಿ, ಶಾಲೆಯನ್ನೂ ಬಡವಿದ್ಯಾರ್ಥಿ ಗಳ ಸಲುವಾಗಿ, ಫ್ರೀ ಬೋರ್ಡಿಂಗನ್ನೂ ನಡಿಸುತ್ತಿರುವರಲ್ಲದೆ, ಶ್ರೀಶರಣ ಬಸವೇಶ್ವರನ ಕಾಲದಿಂದ ನಡೆಸುತ್ತಬಂದಿರುವ ದಾಸೋಹವನ್ನು ಪಂಕ್ತಿಭೇದವಿಲ್ಲದೆ ಈಗಲೂ ನಡಿಸುತ್ತಿರುವರು. ಶ್ರೀಶರಣಬಸವೇಶ್ವರನ ಮಂದಿರದ ಸುತ್ತಲಿನ ಆವಾರವನ್ನು ಸರಿಪಡಿಸಿ ಬೆಳಸಿದ್ದಲ್ಲದೆ, ಕಾಲ ಜ್ಞಾನದಲ್ಲಿ ನಿರೂಪಿಸಿರುವಂತೆ ತ್ರಿಪುರಾಂತಕ ಕೆರೆ ಬತ್ತಿದ ಎರಡು ವರುಷಕ್ಕೆ, ಶ್ರೀ ಸಿದ್ಧರಾಮೇಶ್ವರ ಕೆರೆಯಲ್ಲಿ “ **ಆಪು** ” ಹುಟ್ಟಿ ನಡು ಗಡ್ಡೆಯಾದ ಹನ್ನೊಂದು ವರುಷಕ್ಕೆ, ಹಂಪೆಯ ವಿಠ್ಠಲರಾಯನ ಗುಡಿಯು ದುರಸ್ತಿಯಾದ ಮೂರುವರುಷಕ್ಕೆ, ಶಂಭುಲಿಂಗದ ಬೆಟ್ಟದಲ್ಲಿ ರುವ ಹುಲಿಯು ಸತ್ತ ಹನ್ನೊಂದುವರುಷಕ್ಕೆ, ಕಲ್ಯಾಣದಲ್ಲಿ ವೀರಶೈವ ಮಹಾಸಭೆಯು ನೆರೆದ ಮೂರುವರುಷಕ್ಕೆ, ಕಲಬುರ್ಗಿಯ ಶ್ರೀಶರಣ ಬಸವೇಶ್ವರನ ಗುಡಿಯಮೇಲೆ ಭಂಗಾರದ ಕಳಸವೇರಿ ಅಸ್ಪೃಶ್ಯರು ಒಳಸುಗ್ಗಿದ ನಾಲ್ಕುವರುಷಕ್ಕೆ, ಜಗತ್ತಿಗೆ ಒಂದು ಒಳಿತಾಗುವದೆಂದು ಬರೆದಂತೆ ಪೂಜ್ಯ **ದೊಡ್ಡಪ್ಪಾ**ಅಪ್ಪ ಮತ್ತು ಪೂಜ್ಯಮಾತಾ “ **ಗೋದೂ ಬಾಯಿ** ” ಯವರೂ, ಶಕೆ ೧೮೭೦ ನೇ ಸರ್ವಧಾರಿ ಸಂ||ರದ,

ಫಾಲ್ಗುಣ ಕೃ|| ೪ ದಿವಸ, ಕಳಸದ ಗದ್ದಿಗೆಯನ್ನು, ದೇವಾಲಯದ, ಶಿಖರಕ್ಕೆ ಮುಟ್ಟಿಸಿದರು. ಕೃ|| ೬ ದಿವಸ ಶ್ರೀಶರಣಬಸವೇಶ್ವರನ ಗುಡಿಯ ಗೋಪುರಕ್ಕೆ ಭಂಗಾರದ ಕಳಸವನ್ನು ಹಚ್ಚಿ ಕಾಮಕ್ರೋಧಾದಿ ಅರಿಷಡ್ವರ್ಗಗಳನ್ನು ಧ್ವಂಸಮಾಡಿ, ಮಾಯೆಯೆಂಬ ಹಗ್ಗವನ್ನು ಹರಿದು, ಶಮ-ದಮ-ತಿತಿಕ್ಷೆ ಉಪರತಿಯೆಂಬ ಸೋಪಾನಗಳಿಂದ, ವೈರಾಗ್ಯವೆಂಬ ಪರ್ವತವನ್ನು ಹತ್ತಿ, ಅಲ್ಲಿರುವ ಸುಜ್ಞಾನವೆಂಬ ದಿವ್ಯ ರತ್ನವನ್ನು ಹುಡುಕಿ ಪದಪು ಅರಿಷಡ್ವರ್ಗವೆಂಬ ಕಳ್ಳರಿಗೆ ತಮ್ಮ ಜ್ಞಾನ ರತ್ನವು ಸಿಕ್ಕದಂತೆ, ತಮ್ಮ ಹೃದಯವೆಂಬ ಅಭೇದ್ಯವಾದ ಪೆಟ್ಟಿಗೆಯಲ್ಲಿ ಮಡುಗಿ, ಅದರ ಬೆಳಕಿನಿಂದಲೇ ಪರವಸ್ತುವನ್ನು ಹುಡುಕಿ, ಚನ್ನಾಗಿ ಗ್ರಹಿಸಿ, ಆದರಲ್ಲಿ ಸಮರಸವನ್ನು ಹೊಂದಿ, ಮೈಮರೆದು ಆನಂದಪರ ವಶರಾಗಿರುವರು.

## ಮತ್ತೊಂದು ಕಾಲಜ್ಞಾನ ಆಧಾರ ಹೀಗಿದೆ.

ಶ್ರೀಶರಣಬಸವೇಶ್ವರನ ೧೦೧ ಕಳಸಗಳು ಕಂಗೊಳಿಸಿದಾಗ, ಪುನಃ ಶರಣರ ಅವತಾರವಾಗುವದೆಂದು ಬರೆದಿರುವರು. ಅದರಂತೆ ಅಲ್ಲಲ್ಲಿ ಕಳಸಗಳು ರಂಜಿಸತೊಡಗಿರುವವು.

೧ ಕಲಬುರ್ಗಿ. ೨ ಶಹಬಾದ. ೩ ಚಿತ್ತಾಪೂರ. ೪ ಪರೂತಾಬಾದ. ೫ ಹಾಗರಗುಂಡಿಗಿ. ೬ ಕಿಣಗಿ. ೭ ಬೀದರ. ೮ ಕಾಜಾಪೂರ. ೯ ಮಲಗಾಣ. ೧೦ ಸಿಂಬರಗಿ. ೧೧ ಅರಳಗುಂಡಿಗಿ. ೧೨ ಗೊರಗುಂಡಿಗಿ. ೧೩ ನಗಸೂರು. ೧೪ ಅವರಾದಿ. ೧೫ ಗಣಜಲಖೇಡ. ೧೬ ಮುರುಘಾನೂರು. ೧೭ ಬೆನಕನಹಳ್ಳಿ. ೧೮ ಕೌಲಗಿ. ೧೯ ಕೀರಣಗಿ. ೨೦ ಹೊಳೇ-ಸರಡಗಿ. ೨೧ ಹಾರ-ಸರಡಿಗಿ. ೨೨ ಜಾವಳಿಗಿ.

ಈ ಮೇಲ್ಕಂಡ ಊರು ಪಟ್ಟಣಗಳು ಗುಲಬುರ್ಗ, ಬೀದರ ಜಿಲ್ಲೆಗಳಲ್ಲಿರುತ್ತವೆ. ದೇವಾಲಯಗಳಿದ್ದು ರಥೋತ್ಸವಗಳು ಜರಗುತ್ತವೆ.

ನಮ್ಮ ಭಾಗದಲ್ಲಿ ಮಾತ್ರ ತಳವಗೇರಿ ಗ್ರಾಮದಲ್ಲಿ ಶ್ರೀಶರಣ ಬಸವೇಶ್ವರನ ಗುಡಿಯನ್ನು ಕಟ್ಟಿ ಮೂರ್ತಿಸ್ಥಾಪಿಸಿ ಕಳಸವನ್ನೇರಿಸಿರುವರು. ಪ್ರತಿವರುಷ ರಂಗಪಂಚಮಿಗೆ ರಥೋತ್ಸವವಾಗುತ್ತಿರುವದು. ಬಂಡಿಯಲ್ಲಿ ರಂಗಪಂಚಮಿಗೆ ಉತ್ಸವ, ಕೋನಾಪುರದಲ್ಲಿ ಉತ್ಸವ, ಗಾಣದಾಳದಲ್ಲಿ ರಥೋತ್ಸವ, ಮಾಲಗಿತ್ತಿಯಲ್ಲಿ ಉತ್ಸವ, ನಾಗೇಂದ್ರಗಡಾದಲ್ಲಿ ಉತ್ಸವ,ಈ ಪ್ರಕಾರ ಎಲ್ಲಿ ನೋಡಿದಲ್ಲಿ ಪುರಾಣಶ್ರವಣ ಮಹಾಗಣಾರಾಧನೆ, ಉತ್ಸವ, ಮತ್ತು ತೇರು ಎಳೆಸುತ್ತಿರುವರಂದ ಬಳಿಕ ೧೦೧ ಕಳಸಗಳನ್ನು ಹಚ್ಚುವಲ್ಲಿ ಆಶ್ಚರ್ಯವೇನು....?

ಈ ಚಿಕ್ಕ ಹೊತ್ತಿಗೆಯಲ್ಲಿ ಬರೆದಿರುವ ಲೀಲೆಗಳನ್ನು ಓದುಗರು ನಂಬದಿರಬಹುದು. ಆದರೇ, ಅಂದಿನ ಸದ್ಭಕ್ತರು ಅವನ್ನು ನಂಬಿದ್ದರೆಂದೂ ಇಂದಿಗೂ ನಂಬತಕ್ಕವರು ಇರುವರೆಂದೂ, ಮೇಲೆ ಬರೆದ ಗ್ರಾಮಗಳಲ್ಲಿ ಸ್ಥಾಪಿಸಲ್ಪಟ್ಟ ಶ್ರೀಶರಣಬಸವೇಶ್ವರನಗುಡಿ ಮತ್ತು ಉತ್ಸವ ಹಾಗೂ ರಥೋತ್ಸವಗಳು ಜರಗುವವೆಂದಬಳಿಕ ಅಂದು, ಇಂದು ಹಾಗೂ ಮುಂದು ನಂಬತಕ್ಕವರಿರುವರೆಂದು ನಂಬೋಣ. ಸದ್ಭಕ್ತರಾದ ಭಾವಿಕರು ಈ ಗ್ರಂಥವನ್ನು ತರಿಸಿಕೊಂಡು ಸಂಪೂರ್ಣವಾಗಿ ಓದಿನೋಡಿ ಆ ಮಹಾತ್ಮನು ಆಚರಿಸಿದ, ನಡೆನುಡಿಗಳನ್ನು ತಿಳಿದುಕೊಂಡು, ಧನ್ಯರಾಗಬೇಕೆಂದು ಪ್ರಾರ್ಥಿಸುವೆನು.

## ಉಪಸಂಹಾರ

ರಾಯಚೂರ ಜಿಲ್ಲೆಗೆ ಸೇರಿದ ಕುಷ್ಟಗಿ ತಾಲೂಕ ಕ್ಯೆಕಿ ಹಾಬಲಕಟ್ಟಿ ಗ್ರಾಮದಲ್ಲಿ "ಶ್ರೀ ಶರಣಬಸವೇಶ್ವರ" ಪುರಾಣವನ್ನು ಇಪ್ಪತ್ತು ವರುಷಗಳಿಂದ ಸದ್ಭಕ್ತರಾದ ದೈವದವರು ಪ್ರತಿವರುಷ ವಿದ್ವಜ್ಜನರ ಅಮೃತವಾಣಿಯಿಂದ ಪುರಾಣ ಶ್ರವಣ ಮಾಡಿಕೊಳ್ಳುತ್ತ ಧನ್ಯರಾಗಿ ಪ್ರತಿವರುಷ ಪುರಾಣ ಸಮಾಪ್ತಿಯೊಂದಿಗೆ, ಮಹಾಗಣಾರಾಧನೆಯನ್ನು,

ಬಡ ಜಂಗಮವಟುಗಳಿಗೆ ಅಯ್ಯಾಚಾರ, ಬಡ **ವಧೂ–ವರರಿ**ಗೆ ವಿವಾಹ ಕಾರ್ಯಗಳನ್ನೂ ಶ್ರೀ ಶರಣಬಸವೇಶ್ವರ ಸಂಘದವತಿಯಿಂದ ಜರುಗಿಸಿ ಫಾಲ್ಗುಣ ಕೃ|| ೫ ದಿವಸ ಉತ್ಸವ, ಗಣಾರಾಧನೆ, ಅನ್ನಸಂತರ್ಪಣೆ ಮಾಡುತ್ತ ಬಂದುದರ ಫಲವಾಗಿ, ಸೇವಾಭಾಗಿಗಳಾದ ಸರ್ವರಿಗೂ ಶ್ರೀ ಶರಣಬಸವೇಶ್ವರನ ಕೃಪೆಯಾಗಿ, ಧನ–ಧಾನ್ಯ ಸಮೃದ್ಧಿಯುಳ್ಳವ ರಾಗಿ, ಪುತ್ರ–ಪೌತ್ರ ಕಳತ್ರಸುಖಿಗಳಾಗಿ, ಆಯುರಾರೋಗ್ಯ ಸುಖ–ಸಂಪದವುಳ್ಳವರಾಗಿದ್ದರಿಂದ, ಪುರಾಣಕಾಲಕ್ಕೆ ನನ್ನಸಂಕಲ್ಪ ನೆರವೇರಿ ದರೆ, ಶರಣಬಸವೇಶ್ವರನ ಗುಡಿಯನ್ನು ಕಟ್ಟಿಸುತ್ತೇನೆಂದು ಸಂಕಲ್ಪ ಮಾಡಿದ **ಶ್ರೀ. ಮಹಾದೇವಪ್ಪ ತಂದಿ ಬಾಳಪ್ಪ ಸೊಬಗಿನ ಸಾ|| ನಿಡಗುಂದಿ** ಅವರ ಇಷ್ಟಾರ್ಥಸಿದ್ಧಿಯಾಗಿದ್ದರಿಂದ, ಅವರು ಶ್ರೀ ಶರಣ ಬಸವೇಶ್ವರ ದೇವಾಲಯವನ್ನು ಕಟ್ಟಿಸಲಿಕ್ಕೆ ಪ್ರಾರಂಭಮಾಡಿಸಿ ೨೬೧೧ ರೂಪಾಯಿಗಳನ್ನು ಕಾಣಿಕೆಯಾಗಿ ಸಲ್ಲಿಸಿದರು. ಕಟ್ಟಡವೂ ಪ್ರಾರಂಭವಾಯಿತು. ಶ್ರೀ ಫಕೀರಪ್ಪ ಹವಾಲ್ದಾರ, ಈತನು ೬೦ ವರು ಷದ ಮುದುಕ. ಈತನಿಗೆ ಸಂತಾನವಿದ್ದಿಲ್ಲ. ಈತನು ಒಂದುಸಾವಿರ ರೂಪಾಯಿಗಳನ್ನು ಕಟ್ಟಡಕ್ಕಾಗಿ ಕೊಡುವೆನೆಂದು, ವಾಗ್ದಾನಮಾಡಿದ ಒಂದು ವರುಷದೊಳಗಾಗಿ ಪುತ್ರಸಂತಾನವಾಯಿತು. ೨೦೨ ರೂಪಾಯಿ ಗಳುಮಾತ್ರ ಫಕೀರಪ್ಪನಿಂದ ಕಟ್ಟಡಕಾರ್ಯಕ್ಕಾಗಿ ರೋಖಹಣ ಬಂದಿತು. ಇದರಂತೆ ಅನೇಕ ಸದ್ಭಕ್ತರು ಬೇಡಿಕೊಂಡು ಇಚ್ಛಾಪೂರ್ತಿ ಹೊಂದಿದ್ದರಿಂದ, **ಹಾಬಲಕಟ್ಟಿ**ಯ ದೈವದವರು ತಮ್ಮ ತಮ್ಮ ಯೋಗ್ಯತಾನುಸಾರವಾಗಿ, ಕಾಣಿಕೆಯನ್ನು ಕೊಟ್ಟು, ಹದಿನೈದುಸಾವಿರ ರೂಪಾಯಿಗಳನ್ನು ಖರ್ಚುಮಾಡಿ ಶ್ರೀ ಶರಣಬಸವೇಶ್ವರನ ದೇವಸ್ಥಾನ ವನ್ನು ಕಟ್ಟಿಮುಗಿಸಿ, ಕಳಸವನ್ನಿಟ್ಟರು. ಆದರೆ ಇಂಥ ಪರಮಪವಿತ್ರ ಕರವಾದ ದೇವಸ್ಥಾನದಲ್ಲಿ ಶ್ರೀ ಶರಣಬಸವೇಶ್ವರನ ಮೂರ್ತಿಯನ್ನು ಸ್ಥಾಪಿಸಲಿಕ್ಕೆ ಹಾಬಲಕಟ್ಟಿ ದೈವದವರ ಕೋರಿಕೆಯಂತೆ ಐದನೂರು

ರೂಪಾಯಿಗಳನ್ನು ಖರ್ಚುಮಾಡಿ ನನ್ನ ಪಿತೃಗಳಾದ **ಕೈ|** ಸಾ| **ಶ್ರೀ ದೇವೇಂದ್ರಗೌಡಾ ಶಿವನಗೌಡಾ ಶಿವಾಗೌಡಶಾನಿ ಪಾಟೀಲ ಮೆಣಶಿಗಿ** ಅವರ ಸ್ಮರಣಾರ್ಥಕ್ಕಾಗಿ, **ಶ್ರೀ ಬಾಳಪ್ಪ ರಾಮಪ್ಪ ಸಾಬಣ್ಣವರ** ,ವಿಶ್ವಕರ್ಮ ಬ್ರಾಹ್ಮಣ, ಶಿಲ್ಪಕಲಾರತ್ನ ಮುರಗೋಡ ಅವರಿಂದ ಮೂರ್ತಿಯನ್ನು ಮಾಡಿಸಿದ್ದೇನೆ.

ಈ ಕಲಾಪೂರ್ಣವಾಗಿರುವ ಮೂರ್ತಿಸ್ಥಾಪನೆಯನ್ನು ಇದೇ ಶ್ರೀ. ನೃ. ಶಕ ೧೮೭೬ನೆಯ ಜಯನಾಮ ಸಂ||ರದ, ಫಾಲ್ಗುಣ ಕೃ|| ೧ ತಾ|| ೯—೩—೧೯೫೫ ರಂದು, ಬೆಳಿಗ್ಗೆ ೬ ಗಂಟೆಗೆ, ಕುಂಭಲಗ್ನ ಬ್ರಾಹ್ಮೀ ಮೂಹೂರ್ತದಲ್ಲಿ **ಕುಷ್ಟಿಗಿ ಹಿರೇಮಠದ ಪಟ್ಟದ ಮದ್ವಾನೀ ಕರಿಬಸವ** ( ಪಟ್ಟದ್ದೇವರ ) **ಸ್ವಾಮಿಗಳ** ಅಮೃತಹಸ್ತದಿಂದ ಶ್ರೀ ಶರಣಬಸವೇಶ್ವರ ಮೂರ್ತಿಯ ಪ್ರತಿಷ್ಠಾಪನೆಯನ್ನು ವಿಧಾನೋಕ್ತವಾಗಿ, ಶ್ರೀ. ವೇ. ಪಂಡಿತ **ಶ್ರೀ ಗುರುಲಿಂಗ ಶಾಸ್ತ್ರಿಗಳು** ಹಿರೇಮಠ ಹಾವೇರಿಪೇಟೆ ಧಾರವಾಡ ಅವರಿಂದ ಜರುಗಿಸಿ, ಸುಮಂಗಲೆಯರ ಕಲಶಕನ್ನಡಿ ಮಂಗಳವಾದ್ಯ ವೈಭವದೊಡನೆ, ಶ್ರೀ ಶರಣಬಸವೇಶ್ವರ ಮೂರ್ತಿಗೆ ೧೦೧ ಕೊಡ ಉದಕದಿಂದ ಮಜ್ಜನಮಾಡಿಸಿ, ಅಷ್ಟವಿಧಾರ್ಚನೆ ಷೋಡಶೋಪಚಾರಗಳಿಂದ ಅರ್ಘ್ಯಪಾದ್ಯಾದಿಗಳನ್ನು ಮಧುಪರ್ಕವನ್ನೂ ಸಮರ್ಪಿಸಿ, ಆ ಮೇಲೆ ಕ್ಷೀರಾಭಿಷೇಕಮಾಡಿಸಿ, ಗಂಧೋದಕ, ಕುಶೋದಕ, ಸುವರ್ಣೋದಕ; ರತ್ನೋದಕಗಳಿಂದಲೂ, ಸಕ್ಕರೆ ಜೇನುತುಪ್ಪ, ಎಳೆನೀರು, ಹಣ್ಣಿನರಸ ಮುಂತಾದವುಗಳನ್ನು ಮಂತ್ರಪೂರ್ವಕ ಅಭಿಷೇಕ ಮಾಡಿಸಿ, ರುದ್ರಗಳ ಸಂಖ್ಯಾನುಗುಣವಾಗಿ ಶುದ್ಧೋದಕದಿಂದ ಅಭಿಷೇಕಮಾಡಿಸಿ, ಶ್ರೀ ಶರಣಬಸವೇಶ್ವರನ ಅರ್ಚಕರೂ, ದಾಸೋಹಂಭಾವಿಗಳೂ ಆದ, **ಶ್ರೀ ಕಳಕಯ್ಯಸ್ವಾಮಿ ಹಿರೇಮಠ** ಹಾಬಲಕಟ್ಟಿ ಅವರಿಂದ ೧೦೦೧ ಬಿಲ್ವಪತ್ರಪೂಜೆಯನ್ನು ಮಾಡಿಸಿ ಛತ್ರ ಚಾಮರಾದಿ ಸಕಲ ರಾಜೋಪಚಾರಗಳಿಂದ ವೇದಘೋಷಸ

ಯೊಡನೆ ನೀರಾಜನವನ್ನೆಸಗಿದಬಳಿಕ ಬಡ **"ವಧೂ–ವರರ"** ವಿವಾಹ, **"ಜಂಗಮ ವಟು"**ಗಳ ದೀಕ್ಷಾಸಂಸ್ಕಾರಗಳನ್ನು, ಮಾಡಿಸಿ, ಸೇವಾ ಭಾಗಿಗಳಾದಸರ್ವರಿಗೂ ಫಲಾಶೀರ್ವಾದವನ್ನಿತ್ತು ಬಳಿಕ ಈ ಮಹಾ ತ್ಕಾರ್ಯವನ್ನು ಸಮಾಪ್ತ ಮಾಡಲ್ಪಡುವದೆಂದು ಈ ಮೂಲಕ ಬಿನ್ನವಿಸಿ ಈಗ ನಾನು ಸಂಗ್ರಹಿಸಿ ಒರೆದ " **ಶ್ರೀ ಶರಣಬಸವೇಶ್ವರ ಚರಿತ್ರೆ** " ಯೆಂಬ ಈ ಚಿಕ್ಕ ಹೊತ್ತಿಗೆಯನ್ನು ಭಕ್ತಿ ಜ್ಞಾನ ವೈರಾಗ್ಯಾದಿ ಸಕಲ ನಿಜ ಜಂಗಮ ಲಕ್ಷಣಗಳಿಂದೊಪ್ಪುವ ಚರಾಚಾರ್ಯ ವೃದ್ಧ ಮಹಾ ತಪಸ್ವಿಗಳಾದ **ಅರಭಾವೀ ಪುಣ್ಯಾರಣ್ಯದ ಶ್ರೀ ದುರದುಂಡೀಶ್ವರ ಸಿದ್ಧಸಂಸ್ಥಾನ ಮಠಾಧಿಪತಿಗಳಾದ, ಒಂಭತ್ತನೆಯ ಅಧಿಕಾರಿ ಗಳಾದ ಶ್ರೀ. ಮ. ನಿ. ಪ್ರ. ಶ್ರೀ. ಮಹಾಂತಶಿವಯೋಗಿಗಳ** ಅಡಿದಾವರೆಗಳಿಗೆ ಅರ್ಪಿಸುತ್ತೇನೆ. ಹೈದರಾಬಾದ ಕರ್ನಾಟಕ ಭಾಗ ವಾದ ಹಾಬಲಕಟ್ಟಿ ಗ್ರಾಮವು, ಶ್ರೀ ಶರಣಬಸವೇಶ್ವರನ ಸುಕ್ಷೇತ್ರ ವಾಗಿ, ಶೋಭಾಯಮಾನವಾಗಿ, ಕರ್ನಾಟಕ ದೇಶಮಧ್ಯದಲ್ಲಿ ರಾರಾಜಿಸ ಲೆಂದೂ, ಶ್ರೀ ಶರಣಬಸವೇಶ್ವರ ಪುರಾಣವನ್ನು ಪ್ರತಿವರ್ಷ ತ್ಯಾಗ ಮೂರ್ತಿಗಳಾದ ಹಾಬಲಕಟ್ಟಿ ದೈವದವರಿಂದ ಅಚಂದ್ರಾರ್ಕ ನಡೆದು ಗಣಾರಾಧನೆಯೂ ಅನ್ನ ಸಂತರ್ಪಣೆಯೂ ಉತ್ತರೋತ್ತರ ಬೆಳೆಯ ಲೆಂದೂ, ಈ ಕಾರ್ಯದಲ್ಲಿ ಭಾಗವಹಿಸಿದ ಸರ್ವರಿಗೂ ಶ್ರೀ ಶರಣಬ ಸವೇಶ್ವರನು ಮಂಗಳವನ್ನುಂಟುಮಾಡಲೆಂದೂ, ಜಗತಿಯನ್ನೇ ಪ್ರಾರ್ಥಿಸುತ್ತೇನೆ.

ಪದ್ಯ॥ ಇದು ಸುರಪ ಸುಕುಮಾರ ವೀರಾಖ್ಯ ವಿರಚಿಸಿದ।
ಸದಮಲದ ಲೀಲೆ ಇದು ಪದುಳದಿಂದೋದುವರ್ ।
ಮುದದಿಂದ ಪೇಳುವರ್ ಕೇಳುವರ್ ಪಠಿಸುವರ್
ಮುಕ್ತಪಥದೊಳಗಿಪ್ಪರು ॥ ೧ ॥

**ಸಮಾಪ್ತಿ:**

॥ ಶ್ರೀ ಗುರು ಪ್ರಸನ್ನ ॥



ನನ್ನ ಜೇಷ್ಠ ಭ್ರಾತೃಗಳಾದ ಕೈ॥ ವಾ॥ ಬಸವನಗೌಡರ, ದೀಕ್ಷಾಗುರು
**ಶ್ರೀ ಸಿದ್ಧರಾಮದೇವರು**

## ಕೃತಜ್ಞತೆ

ಈ ಚರಿತ್ರೆಗೆ ಬೇಕಾಗಿದ್ದ ಸಕಲ ವಿಷಯಗಳನ್ನು ಒದಗಿಸಿಕೊಟ್ಟ ಗುಡಗುಂಟಿ ಮಹಾನುಭಾವರಾದ, **ಕೈ॥ ವಾ॥ ಶ್ರೀ ಸಿದ್ಧರಾಮ ಶಿವಾಚಾರ್ಯರಿಗೆ,** ನಾನೂ ನನ್ನ ಮನೆತನದವರೂ ಚಿರಋಣಿಯಾಗಿರುವೆವು.

ಸಂಗ್ರಾಹಕರು.

|| ಶ್ರೀ ಗುರು ಶರಣಬಸವೇಶ್ವರ ಪ್ರಸನ್ನ ||



**ಶ್ರೀ ಶರಣಬಸವೇಶ್ವರರು**

ಶರಣ ಸಂಸ್ಕೃತಿಯ ಅಮೃತಕಿರಣವಾಗಿ ಜನಜೀವನವನ್ನು ತಣಿಸುತ್ತಿರುವ, **ಶ್ರೀ ದೊಡ್ಡಪ್ಪಾಅಪ್ಪಾ ಊರ್ಫ ಶರಣಪ್ಪನವರ** ಉತ್ತರಾಧಿಕಾರಿಗಳಾದ ಏಳನೆಯ ಪೀಠಕ್ಕೆ ಬರುವ **ಶರಣಪ್ಪನವರು.**

**ಶ್ರೀ ಶರಣಬಸವೇಶ್ವರ ಸಂಸ್ಥಾನ ಗುಲಬುರ್ಗಾ**

# ಅಷ್ಟಾವರಣ ಮಹಾತ್ಮೆ

ಪ್ರಣವ ಪಂಚಾಕ್ಷರಿ ಪರಶಿವ ಗುರುವನ್ನು
ಮನದಲ್ಲಿ ನೆನೆಯಮ್ಮ ತಂಗೀ ॥ ಇದು ॥
ಘನವೆಂದು ತಿಳಿ ಮಂಗಳಾಂಗೀ ॥ ೧ ॥

ಬಿಡದೆ ಮುಚ್ಚಿದಕೆಟ್ಟ ಜಡವೆಲ್ಲ ಕಡೆಗಿಟ್ಟ
ಕಡುಮುಕ್ತಿ ಕೊಟ್ಟಾತ ತಂಗೀ ॥ ಇನ್ನು ॥
ಬಿಡವೇಡ ತಿಳಿ ಮಂಗಳಾಂಗೀ ॥ ೨ ॥

## — ಗುರು —

ನಗುರೋರಧಿಕವೆಂದು ಜಗದಿ ಸಾರುವ ಶೃತಿ।
ನಿಗಮವೆಂದು ತಿಳಿಯಮ್ಮ ತಂಗೀ ॥ ಸರ್ವ ॥
ಜಗದೀ ಶ್ರೀಗುರು ಮಂಗಳಾಂಗೀ ॥ ೧ ॥

ಹಿಂದಣ ಜನ್ಮದಿ ಬಂದ ಪುಣ್ಯದರಾಶಿ।
ಇಂದಿಗೆ ಒದಗಿತೆ ತಂಗೀ ॥ ನಿತ್ಯಾ ॥
ನಂದವು ತಿಳಿ ಮಂಗಳಾಂಗಿ ॥ ೨ ॥

ಅನಕಾಲದಿ ಗುರು ದೇವನ ಪದವನ್ನು।
ಭಾವದಿ ಭಜಿಸಮ್ಮಾ ತಂಗೀ ॥ ಇದು ॥
ಕೇವಲ ತಿಳಿ ಮಂಗಳಾಂಗೀ ॥ ೩ ॥

## — ಲಿಂಗ —

ಇಷ್ಟಲಿಂಗವೆ ನಿನ್ನ ಶ್ರೇಷ್ಠ ಚಿತ್ಕಳೆ ಯೆಂದು
ಕೊಟ್ಟನು ಗುರುನಾಥ ತಂಗೀ ॥ ಮನ ॥
ಮುಟ್ಟಿ ಪೂಜಿಸು ಮಂಗಳಾಂಗೀ ॥ ೧ ॥

ಗುರು ಕೊಟ್ಟ ಲಿಂಗವ ಕರಮನ ಭಾವದಿ
ಇರಿಸಿ ನೀನೊಲಿಯಮ್ಮ ತಂಗೀ ॥ ಇದು ॥
ಪರತತ್ವವೆಲಿ ಮಂಗಳಾಂಗೀ ॥ ೨ ॥

— ಜಂಗಮ —

ಸಂಗರಹಿತ ಮಹಾಲಿಂಗವೆ ನಿರುಪಮ ।
ಜಂಗಮ ಮೂರ್ತಿಯೇ ತಂಗೀ ॥ ಅಂತ ॥
ರಂಗದಿ ತಿಳಿ ಮಂಗಳಾಂಗೀ ॥ ೧ ॥

—ಪಾದೋದಕ—

ಧರೆಯ ತೀರ್ಥಗಳೆಲ್ಲ ಗುರುಪಾದ ತೀರ್ಥಕ್ಕೆ ।
ಸರಿಯಲ್ಲ ಕೇಳಮ್ಮ ತಂಗೀ ॥ ಇದ ॥
ನರಿತು ಸೇವಿಸು ಮಂಗಳಾಂಗೀ ॥ ೧ ॥

— ಪ್ರಸಾದ —

ಆದ ವಸ್ತುವಿನಿಂದ ಲಾದುದು ಶುದ್ಧ ಪ್ರ– ।
ಸಾದ ವೆಂದರಿಯಮ್ಮ ತಂಗೀ ॥ ಜನ್ಮ ॥
ಬಾಧೆಯ ಕಳೆಮಂಗಳಾಂಗೀ ॥ ೧ ॥

— ವಿಭೂತಿ —

ಶ್ವಸನ ಸಪ್ತಕವಳಿ ದೆಸೆವ ಚಿದ್ಭಸ್ಮವ ।
ನೊಸಲಿನೊಳ್ ಧರಿಸಮ್ಮ ತಂಗಿ ॥ ಮುಕ್ತಿ
ವಶವಪ್ಪುದೆಲಿ ಮಂಗಳಾಂಗೀ ॥ ೧ ॥

## — ರುದ್ರಾಕ್ಷಿ —

ಕ್ಷುದ್ರಗುಣಂಗಳ ಛಿದ್ರಿಸು ವನುಪಮ |
ರುದ್ರಾಕ್ಷಿ ಧರಿಸಮ್ಮ ತಂಗೀ || ಜ್ಞಾನ ||
ಮುದ್ರೆಯೊಳಿರು ಮಂಗಳಾಂಗೀ || ೧ ||

## — ಮಂತ್ರ —

ವೇದ ಮಂತ್ರಗಳಿಗಾದಿ ಷಡಾಕ್ಷರಿ |
ಮೋದದಿ ಜಪಿಸಮ್ಮ ತಂಗೀ || ಪ್ರಣವ ||
ನಾದವ ತಿಳಿ ಮಂಗಳಾಂಗೀ || ೧ ||

## — ಭಕ್ತಿ —

ಅಷ್ಟವರ್ಣದಿ ನಿಜ ನಿಷ್ಠೆ ಇದ್ದರೆ ಭವ
ಮುಟ್ಟದು ನಿನ್ನನು ತಂಗೀ || ಗುರಿ ||
ಮುಟ್ಟಬೇಕಲೆ ಮಂಗಳಾಂಗೀ || ೧ ||

## — ಶಿವಾರ್ಪಣಮಸ್ತು —



# — ಹರಕೆ —

ನಮ್ಮನ್ನು ಸಾಕಿ ಸಲುಹಿ ದೊಡ್ಡವರನ್ನಾಗಿ ಮಾಡಿ
ಕೃಪೆಯಿಂದ ಮೈದೋರಿ ಹರನಲ್ಲಿ ಬೆರೆತ ನಮ್ಮ
ಸೋದರತ್ತಿ ಕೈ। ವಾ। ದ್ಯಾಮವ್ವಗೌಡಶಾನಿ
ಪಾಗಾದ, ಮೆಣಶಿಗಿ ಅವರು ನಮ್ಮ
ಶ್ರೀ ಶರಣ ಬಸವೇಶ್ವರನನ್ನು
ನಂಬಿ ಕಟ್ಟಿಟ್ಟ ಮುಡಿಪು
ಇಂದು ಶರಣರ ಪಾದಪದ್ಮಂಗಳಲ್ಲಿ ಸಮರ್ಪಿಸಿ,
ಕೃತಾರ್ಥರಾಗಿದ್ದೇವೆ.

ಶ್ರೀಮತಿ ದೊಡ್ಡವ್ವಾ ಕೋಂ ರಾಜಪ್ಪ ಪವಾಡಿ, ನೇಸರಗಿ
ಶ್ರೀಮತಿ ಮಹಾಂತವ್ವಾ ಕೋಂ ಶಿವಪುತ್ರಪ್ಪ ತಡಕೋಡ, ಧಾರವಾಡ

# ಈ ಪುಸ್ತಕಗಳು ದೊರೆಯುವ ವಿಳಾಸ

೧ ಶ್ರೀ ಟಿ. ಬಿ. ಕಾಶೀಕಾಪಸೆ ಬುಕ್-ಸೇಲರ ಕುಲಬುರ್ಗ

೨ ಮಹಾನಂದಾ ಬುಕ್‌ಡಿಪೋ ಯಾದಗಿರಿ

೩ ಶ್ರೀ ಕೇ. ವೀರಣ್ಣ & ಸನ್ಸ್ ಆತ್ಮಾನಂದ ಬುಕ್‌ಡಿಪ್ರೋ ರಾಯಚೂರ

೪ ಶ್ರೀ ಸರಸ್ವತಿ ಬುಕ್‌ಡಿಪೋ ರಾಯಚೂರು

೫ ಶ್ರೀ ತುಳಜಪ್ಪಾ ಚಿತ್ರಗಾರ ಸ್ಟೇಶನರಿ ಮರ್ಚಂಟ ಕುಷ್ಟಗಿ

೬ ಶ್ರೀ ಶಿವರುದ್ರಪ್ಪಾ ಬಸಪ್ಪಾ ಅಡೂರು ಕುಷ್ಟಗಿ

೭ ಶ್ರೀ ಶರಣಯ್ಯಾ ಬಸಯ್ಯಾ ಮಠಪತಿ ರಂಗಂಪೇಟ

೮ ಶ್ರೀ ಮಹಾಂತೇಶ ಬುಕ್‌ಡಿಪೋ ಬಾಗಲಕೋಟ

೯ ಆಕಳವಾಡಿ ಬುಕ್‌ಡಿಪೋ, ವಿಜಯರೋಡ ಧಾರವಾಡ

೧೦ ಶ್ರೀ ದೇಸಾಯಿ ಬುಕ್‌ಡಿಪೋ, ಸುರಪುರ

ಮುದ್ರಕರು :
ಶ್ರೀ ಎಸ್. ವಾಯ್. ಪವಾರ,
ಧಾರವಾಡ ಪ್ರಿಂಟಿಂಗ ಪ್ರೆಸ್, ಧಾರವಾಡ